ಶ್ರೀ.

# ದ್ರೌಪದೀ ವಸ್ತ್ರಾಪಹರಣ.

ಎಂಬ

## (ಅಕ್ಷಯಪ್ರದಾನ ವಿವರಣಗ್ರಂಥವು.)

"ಭಕ್ತ್ಯಾ ಗುರೌಮಯ್ಯನುಕಂಪಯಾ ಚ
ಪ್ರೀತಾಸ್ಮಿ ತೇ ಪುತ್ರ ವರಂವೃಣೀಷ್ವ|
ನ ಕೇವಲಾನಾಂ ಪಯಸಾಂ ಪ್ರಸೂತಿಃ
ಅವೇಹಿ ಮಾಂ ಕಾಮದುಘಾಂ ಪ್ರಸನ್ನಾಂ || "

ಪ್ರಥಮಮುದ್ರಣ ೧೫೦೦ ಪ್ರತಿಗಳು

ನಂಜನಗೂಡು.
"ಹಿತೈಷಿಣೀ" "ನಂದಿನೀ"—ಮಾತೃಮಂದಿರದಲ್ಲಿ
ಪ್ರಚುರಪಡಿಸಲ್ಪಟ್ಟಿತು.

ಬೆಂಗಳೂರು.
ಕ್ಯಾಕ್ಸ್ಟನ್ ಬ್ರಾಂಚ್ ಮುದ್ರಣಾಲಯದಲ್ಲಿ ಮುದ್ರಿಸಲ್ಪಟ್ಟಿತು.
೧೯೧೮.

ಕ್ರಯ ೦-೬-೦ 

ಕರ್ಣಾಟಕ ನಂದಿನಿಯ ದ್ವಿತೀಯ ವರ್ಷದ ಪ್ರಥಮಕಾಣಿಕೆ.

ಶ್ರೀ.

# ದ್ರೌಪದೀ ವಸ್ತ್ರಾಪಹರಣ.

ಎಂಬ

## (ಅಕ್ಷಯಪ್ರದಾನ ವಿವರಣಗ್ರಂಥವು.)

"ಭಕ್ತ್ಯಾ ಗುರೌ ಮಯ್ಯನುಕಂಪಯಾ ಚ
ಪ್ರೀತಾಸ್ಮಿ ತೇ ಪುತ್ರ ವರಂವೃಣೀಷ್ವ|
ನ ಕೇವಲಾನಾಂ ಪಯಸಾಂ ಪ್ರಸೂತಿಃ
ಅವೇಹಿ ಮಾಂ ಕಾಮದುಘಾಂ ಪ್ರಸನ್ನಾಂ ||"

ಸಂಪಾದಿಕಾ
ತಿರುಮಲಾಂಬಾ ಅವರಿಂದ
ನಂಜನಗೂಡು.

"ಹಿತೈಷಿಣೀ" "ನಂದಿನೀ"— ಮಾತೃಮಂದಿರದಲ್ಲಿ
ಪ್ರಚುರಪಡಿಸಲ್ಪಟ್ಟಿತು.

ಬೆಂಗಳೂರು.

ಕ್ಯಾಕ್ಸ್ಟನ್ ಬ್ರಾಂಚ್ ಮುದ್ರಣಾಲಯದಲ್ಲಿ ಮುದ್ರಿಸಲ್ಪಟ್ಟಿತು.

೧೯೧೮

ಕ್ರಯ ೦-೩-೦



(ಕರ್ನಾಟಕ)

# "ನಂದಿನಿ"

ವ್ರತ, ನೀತಿ, ವಿದ್ಯಾ, ವಿಷಯಗಳನ್ನೊಳಕೊಂಡು ಸ್ತ್ರೀಯರ ಗೃಹಶಿಕ್ಷಣ, ಶಾಲಾಶಿಕ್ಷಣ, ಮನಶ್ಶಿಕ್ಷಣಗಳ ಕ್ರಮವನ್ನು ಪ್ರತಿಪಾದಿಸುವ, ಸ್ತ್ರೀಯರ ಸೌಜನ್ಯಾಭಿವೃದ್ಧಿಗಾಗಿ

ಸ್ತ್ರೀಕರ್ತೃತ್ವದಿಂದ ಪ್ರಕಟವಾಗುತ್ತಿರುವ

ಉತ್ತಮ ತರದ ಕನ್ನಡನುಡಿಯ

ಮಾಸಪತ್ರಿಕೆ.



---

ಇದೇ ಪಿಂಗಳ ಸಂವತ್ಸರದ ಆಶ್ವಯುಜ ಶುದ್ಧ ದಶಮಿಯಿಂದ ದ್ವಿತೀಯ ವರ್ಷಾರಂಭ.



——o——

ಕ್ರೌನ್ ನಾಲ್ಕರ ಆಕಾರದ ೩೨ ಪುಟಗಳಿಂದ ಸಚಿತ್ರವಾಗಿ ಕಾಲಕ್ಕೆ ತಪ್ಪದೆ ಆರ್ಯಮಹಿಳೆಯರ ಪಾರಾಯಣಕ್ಕೆ ಅನುಕೂಲವಾಗಿಯೂ, ಬಾಲ-ಬಾಲೆಯರ ಚಿತ್ತವಿಕಾಸಕ್ಕೆ ಸಹಕಾರಿಯಾಗಿಯೂ, ಉತ್ತಮಸ್ತುತಿ ಗೀತಾಪ್ರಬಂಧಗಳನ್ನು ಕಾಲಕ್ಕೆ ತಕ್ಕಂತೆ ಪ್ರಕಾಶಪಡಿಸುತ್ತಿರುವುದು.

ಈ ವರ್ಷದ ಚಂದಾದಾರರಿಗೆ ೩ ಬಹುಮಾನ ಪುಸ್ತಕಗಳು. ಬೇಕಾದವರು ಪ್ರೋತ್ಸಾಹಿಸಿರಿ.

ವಾರ್ಷಿಕ ಚಂದಾ ೨-೪-೦ ಹಾಸಲು ವಿ. ಪಿ. ಖರ್ಚು ೦-೫-೦

—ಶ್ರೀಕೃಷ್ಣ ಪರಮಾತ್ಮನೇನಮಃ—

## ಸಮರ್ಪಣೆ.



" ವಂದೇ ಮುಕುಂದಮರವಿಂದ ದಳಾಯತಾಕ್ಷಂ
ಕುಂದೇಂದು ಶಂಖ ದಶನಂ ಶಿಶುಗೋಪವೇಶಮ್ |
ಇಂದ್ರಾದಿ ದೇವಗಣ ವಂದಿತ ಪಾದ ಪೀಠಂ
ವೃಂದಾವನಾಲಯ ಮಹಂ ವಸುದೇವಸೂನಮ್ || "

ಭೂಭಾರಪರಿಹಾರನೇ, ಭಕ್ತವತ್ಸಲನೇ ! ಪಾಂಡವ ಪ್ರಿಯನೇ,
ದ್ರೌಪದೀಮಾನರಕ್ಷಕನೇ !

ಧರ್ಮಸಂರಕ್ಷಣ ದಕ್ಷನಾದ ನಿನ್ನ ಶ್ರೀಪಾದಸನ್ನಿಧಿಯಲ್ಲಿ
ಈ ಗ್ರಂಥಕುಸುಮವನ್ನು ಭಕ್ತಿಪುರಸ್ಸರವಾಗಿ ಅರ್ಪಿತಗೊಳಿಸಿ
ಪ್ರಕಾಶಪಡಿಸಿರುವೆವು.

## ವಿಶೇಷ ಸೂಚನೆ

# "ಜಾನಕೀ ಕಲ್ಯಾಣ"

(ನಾಟಕಂ)

ಮುದ್ರಣದಲ್ಲಿರುವುದು ನಾಲ್ಕಾರು ಚಿತ್ರಗಳಿಂದಲೂ, ಹಲವು ವಿಚಾರಗಳಿಂದಲೂ ಕೂಡಿದ ಈ ಪುಸ್ತಕವು ೫ ಅಂಕಗಳುಳ್ಳ ನಾಟಕ ರೂಪದಿಂದ ಮುಂದಿನ ಕಾಳಯುಕ್ತಿ ಸಂವತ್ಸರದ ಚೈತ್ರ ಶುದ್ಧ ನವಮಿ ಯಲ್ಲಿಯೂ,

# "ಶ್ರೀ ಲಕ್ಷ್ಮೀನೃಸಿಂಹಸ್ತವ"

ಈ ದಿವ್ಯಪದ್ಯಕಾವ್ಯವು ಲಕ್ಷ್ಮೀನೃಸಿಂಹಸ್ವಾಮಿಯ
ಚಿತ್ರದೊಡನೆ ವೈಶಾಖದಲ್ಲಿ

# "ಶ್ರೀ ನೃಸಿಂಹಜಯಂತಿ"

ಯಲ್ಲಿಯೂ

ಪ್ರಕಾಶಿಸಲ್ಪಡುವುದಲ್ಲದೆ

ಕರ್ಣಾಟಕ ನಂದಿನಿಯ ಈ ವರ್ಷದ ಚಂದಾದಾರರಿಗೆಲ್ಲರಿಗೂ

ಉಚಿತಕಾಣಿಕೆಯಾಗಿ ಒಪ್ಪಿಸಲ್ಪಡುವುದು.

# ಪ್ರಸ್ತಾವನೆ.

ಕ್ಷಮೆಯಿರಲಿ ! ಸೋದರೀ ಸೋದರರೇ !!

ಈ ಪ್ರಬಂಧವು ನಮ್ಮ ಆತ್ಮಕೃತಿಗೆ ಒಳಪಟ್ಟುದಲ್ಲ. ಕವಿತೆಯಲ್ಲಿ ನಮಗೆ ಪರಿಶ್ರಮವಿಲ್ಲವೆಂದು ಮುಕ್ತಕಂಠದಿಂದ ನಿವೇದಿಸುತ್ತಿರುವೆವು. ಅಜ್ಞಾತ ದೋಷಗಳೇನಾದರೂ ಇದರಲ್ಲಿದ್ದರೂ ಕ್ಷಮೆಯಿರಲಿ!

ಈ ಯಕ್ಷಗಾನ ಪ್ರಬಂಧವನ್ನು ರಚಿಸಿದವರಾರೆಂಬುದು ನಮಗೆ ಇನ್ನೂ ದೃಢವಾಗಿ ತಿಳಿದು ಹೇಳುವಂತಿಲ್ಲ. ನಮಗೆ ತಿಳಿದುದರಲ್ಲಿ ಈ ವರೆಗೆ ಒಂದೆರಡು ಬಾರಿ ಮುದ್ರಣವಾಗಿ ಸ್ತ್ರೀಯರೆಲ್ಲರಿಗೂ ಪಾರಾಯಣ ಗ್ರಂಥಗಳಾಗಿರುವ "ದ್ರೌಪದೀ ಸ್ವಯಂವರ" "ಸುಭದ್ರಾಪರಿಣಯ", "ಶಶಿರೇಖಾಕಲ್ಯಾಣ" "ರುಕ್ಮಾಂಗದ ಚರಿತ್ರೆ" "ಚಂದ್ರಹಾಸ" ಇತ್ಯಾದಿ ಯಕ್ಷಗಾನ ಪ್ರಬಂಧಗಳನ್ನು ರಚಿಸಿದ ಶ್ರೀತಿಮ್ಮಪ್ಪದಾಸರೆಂಬವರಿಂದ ವಿರಚಿತವಾದುದೆಂದೂ, ಇದಲ್ಲದೆ ಉಷಾಪರಿಣಯ, ನಳಚರಿತ್ರೆಯೇ ಮೊದಲಾದ ಮುದ್ರಣವಾಗದಿರುವ ಗ್ರಂಥಗಳು ಇನ್ನೂ ನಾಲ್ಕಯ್ದು ಇವರಿಂದ ವಿರಚಿತವಾದುದಿವೆಯೆಂದೂ ತಿಳಿದಿರುವೆವು. ಅಲ್ಲದೆ ಈ ಪ್ರಬಂಧವನ್ನು ಈಗ ೧೬ ವರ್ಷಗಳ ಹಿಂದೆ ಮುದ್ರಿಸಲು ಭಗೀರಥ ಪ್ರಯತ್ನ ಪಟ್ಟಂತೆಯೂ, ಭಗವದಿಚ್ಛೆಯಿಲ್ಲದಿದ್ದುದರಿಂದ ಈ ವರೆಗೆ ಸಾಧ್ಯವಾಗಲಿಲ್ಲವೆಂದೂ, ಇದನ್ನು ಎಷ್ಟು ಪ್ರಯಾಸಪಟ್ಟಾದರೂ ಪ್ರಕಾಶಕ್ಕೆ ತಂದು ತಮ್ಮ ಮನಸ್ಸಂತೋಷಪಡಿಸಬೇಕೆಂದೂ ನಮ್ಮ ಮಹಿಳೆಯರಲ್ಲಿ ಬಹುಮಂದಿಯ ನಿರ್ಬಂಧಕ್ಕೊಳಪಟ್ಟು, ಈ ಪ್ರಯತ್ನವನ್ನು ಕಯ್ಕೊಂಡು ನಾವು ವಿಚಾರಿಸಿದುದರಲ್ಲಿ ಗ್ರಂಥಕರ್ತರು ದಿವಂಗತರಾಗಿ ಇಪ್ಪತ್ತು ಮುವ್ವತ್ತು ವರ್ಷಗಳಾದಂತೆಯೂ, ಅವರ ವಾರಸುದಾರರು ಕೂಡ ಯಾರೂ ಇರುವುದಿಲ್ಲವೆಂದೂ ತಿಳಿದುಬಂದಿದೆ. ಇದಕ್ಕೂ

ಹೆಚ್ಚಾಗಿ ಗ್ರಂಥಕರ್ತರ ವಿಚಾರವಾಗಿ ನಾವು ಏನನ್ನೂ ಹೇಳಲಾರೆವು. ನಮ್ಮ ವಾಚಕರಲ್ಲಿ ಆರಾದರೂ ಇವರ ಪೂರ್ವೋತ್ತರ ವೃತ್ತವನ್ನು ತಿಳಿದವರಿದ್ದು ಬರೆದು ಕಳುಹಿದರೆ ನಾವು ಅದನ್ನು ಸಂತೋಷದಿಂದ ಪ್ರಕಾಶಕ್ಕೆ ತರುವೆವು.

ಮುಖ್ಯವಾಗಿ ನಾವು ನಿವೇದಿಸುವುದೆಂದರೆ ಇಷ್ಟು. ನಮ್ಮ ಸನ್ಮಾನ್ಯ ಭ್ರಾತೃಗಳಾದ ಕರ್ಣಾಟಕ ಸಾಹಿತ್ಯ ಪರಿಷತ್ತಿನವರೂ, ಕರ್ಣಾಟಕವಿದ್ಯಾವರ್ಧಕ ಸಂಘದವರೂ ಕೈಕೊಂಡಿರುವ ಭಾಷಾಭ್ಯುದಯ ಕಾರ್ಯದಲ್ಲಿ ಸಾನುಭೂತಿಯನ್ನು ತೋರಿಸುವುದೂ, ಯಥೋಚಿತವಾದ ಸಹಾಯಗಳನ್ನೊದಗಿಸುವುದೂ ನಮ್ಮ ಆರ್ಯ ಸೋದರಿಯರೆಲ್ಲರ ಕರ್ತವ್ಯಕ್ಕೆ ಸೇರಿದುದಾಗಿದೆ. ಏಕೆಂದರೆ, ನಮ್ಮ ಪೂರ್ವಕವಿಗಳಿಂದ ರಚಿತವಾದ ಭಗವದ್ಭಕ್ತಿಪರ ಗೀತಾ, ಯಕ್ಷಗಾನ, ಪ್ರಬಂಧಗಳಲ್ಲಿ ಬಹುಭಾಗವು ನಮ್ಮ ಮಹಿಳೆಯರ ದಯಾಭಿಕ್ಷೆಯನ್ನೇ ಬೇಡುತ್ತ ಮೂಲೆಪಾಲಾಗಿ ಬಿದ್ದಿರುವುವು. ಅವುಗಳಲ್ಲಿ ಎಷ್ಟೋ ಮುದ್ರಣದ ಮುಖವನ್ನೂ ಕಾಣದೆ ಹಸ್ತಪ್ರತಿಯಲ್ಲಿ ಗೆದ್ದಲಿಗೆ ಆಹಾರವಾಗುತ್ತಿರುವುವು. ಅಂತಹವನ್ನು ಆರಿಸಿ ತೆಗೆದುಕೊಡುವುದೂ, ಮಂಜುಳವಾಗಿ ಹಾಡಿ, ಓದಿ, ಪ್ರಸಿದ್ಧಿಗೆ ತರುವುದೂ ನಮ್ಮವರ ಕೆಲಸವೇ ಆಗಿರುವುದು. ಆದರೆ ಈಗ ನಮ್ಮ ಮಹಿಳೆಯರಲ್ಲಿಯೂ ನವನಾಗರಿಕತೆಯ ಹುಚ್ಚೇರಿದವರು ಇಂತಹದನ್ನು ಕಡೆಗಣ್ಣಿಂದಲೂ ನೋಡುವದಾಗಿಲ್ಲ. ಹೊಸಹೊಸ ಮಟ್ಟಿನ ನಾಟಕಗಳ ಹಾಡುಗಳೂ, ಶೃಂಗಾರ ಜಾವಡಿಗಳೂ, ಇಂಗ್ಲಿಷ್ ನೋಟುಗಳೂ ಬಂದರೆ ಅವರಿಗೆ ಸಾಕು; ಬೇಕಾದಷ್ಟು ಆರಾಮವಾಗಿ ಹೋಗುತ್ತದೆ. ಇಂತಹ ಹಳೆಯ ಹರಿಕಥೆದಾಸರ ಕಂತೆಯನ್ನು ಹಿಡಿದು, ಹಳ್ಳಿಯ ಸಂಚಾಂಗಭಟ್ಟರಂತೆ ಸುತ್ತುಮುತ್ತಲೂ ಹೆಂಗಸರ ಗುಂಪು ಕಟ್ಟಿಕೊಂಡು ಹಾಡುವುದಾಗಲೀ, ಓದುವುದಾಗಲೀ, ಅವರಿಗೆ ಸರಿಬೀಳುವಂತಿಲ್ಲ. ಅಷ್ಟೇಕೆ ? ಇದರಲ್ಲಿ ವಿಶೇಷ ಶ್ರದ್ಧೆಯು

ಳ್ಳವರಾಗಿದ್ದವರು ಕೂಡ, ಈಚೀಚೆಗೆ ನಿರಾಕರಿಸುತ್ತ ಬಂದಿರುವರು. ಹೀಗಾಗಿ ಇಂತಹ ಸತ್ಕಾರ್ಯಗಳ ಪರಿಣಾಮವೇನಾಗಿದೆ ? ಸ್ತ್ರೀಯರೇ ಹೀಗಾದಬಳಿಕ ಇನ್ನು ಪುರುಷರು ತಮ್ಮ ನಾಡನುಡಿಯನ್ನು ದೂಡಿದ ರೆಂದೇಕೆ ಹೇಳಬೇಕು ? ಆದರೆ, ಎಲ್ಲರೂ ಹಾಗೆಯೇ ಇರುವರೆಂಬುದು ನಮ್ಮ ಮತವಲ್ಲ. ಕೆಲವರು ಅಕ್ಕರೆಯುಳ್ಳವರೂ ಇರುವರು. ಅಂ ತಹ ಅಕ್ಕರೆಯುಳ್ಳ ಅಕ್ಕತಂಗಿಯರಲ್ಲಿ ಕೆಲವರುಮುಂದೆ ಬಂದು ತಮ್ಮ ತಮ್ಮಲ್ಲಿದ್ದ ಹಾಡುಗಳನ್ನೂ, ಯಕ್ಷಗಾನಪ್ರಬಂಧಗಳನ್ನೂ, ಪ್ರಕಾ ಶಕ್ಕೆ ತರಲು ಬದ್ಧಕಂಕಣರಾಗಿ ಹಸ್ತಪ್ರತಿಗಳನ್ನೂ ನಮ್ಮಲ್ಲಿಗೆ ಧೈ ರ್ಯದಿಂದ ಈಗತಾನೆ ಕಳುಹಿತ್ತಿರುವರು. ಇಂತಹ ಮಹಿಳಾ ಮಣಿಯರಲ್ಲಿ ಈ ಪುಸ್ತಕದ ಹಸ್ತಪ್ರತಿಯನ್ನು ಒದಗಿಸಿಕೊಟ್ಟು ಸಹ ಕರಿಸಿದವರಲ್ಲಿ ನಮ್ಮ ಸನ್ಮಾನ್ಯ ಭಗಿನಿಯರಾದ ಶ್ರೀಮತಿರಂಗಮ್ಮ (ದಿವಂಗತ ಕಂಭಂ ಚೊಕ್ಕಣ್ಣನವರ ಧರ್ಮಪತ್ನಿ) ಮತ್ತು ಅವರ ಅಕ್ಕಂದಿರು (ನಮ್ಮ ಮಾತೃಭಗಿನಿ) ಶ್ರೀ|| ಸೌ|| ಗರುಡಮ್ಮ (ಇವರು ಈಗ ಪಕ್ಷಾವಧಿಯಲ್ಲಿಯೇ ಶ್ರೀಪದವನ್ನಡರಿದರೆಂದೂ ಇವರಬಳಿಯ ಲ್ಲಿದ್ದ ಇನ್ನೂ ನಾಲ್ಕಾರು ಹಸ್ತಪ್ರತಿಗಳು ಹೊರಹೊರಡಲವಕಾ ಶವು ತಪ್ಪಿತೆಂದೂ ತಿಳಿಸಲು ವಿಷಾದಿಸುವೆವು.) ನವರೂ ಮುಖ್ಯವಾಗಿ ರುವರು. ಇವರಿಬ್ಬರಿಗೂ ಮತ್ತು ಇನ್ನೂ ಹಸ್ತಪ್ರತಿಯಲ್ಲಿಯೇ ಇರುವ "ಭಾಗವತ" [ಚಾ|| ನಗರದ ರಾಮಾನುಜಾಚಾರ್ಯ (ದಿವಂಗತ) ವಿರ ಚಿತವಾದುದು] "ಗೋಪಿಕಾವಿಲಾಸ" "ರಾಧಾವಿಲಾಸ" "ವ್ಯಾಘ್ರಾಚಲ ಮಹಾತ್ಮೆ" ಮೊದಲಾದುವುಗಳನ್ನು ಕಳುಹಿಕೊಟ್ಟಿರುವ ನಮ್ಮ ಚಾಮ ರಾಜನಗರದ ಮತ್ತು ಮಳೂರು ನಿವಾಸಿಗಳಾದ ಆರ್ಯಭಗಿನಿಯವ ರಿಗೂ ನಮ್ಮ ಕೃತಜ್ಞತಾಪೂರ್ವಕ ವಂದನೆಗಳನ್ನು ಒಪ್ಪಿಸಿರುವೆವು.

ಇನ್ನು ಈ ಪುಸ್ತಕ ಪ್ರಕಟನೆಯ ವಿಚಾರವಾಗಿ ಒಂದೆರಡು ಮಾತುಗಳು:—ಇದರಲ್ಲಿ ಬಂದಿರುವ ದ್ವಿಪದೆಗಳು ಒಂದಾದರೂ ಪ್ರಾಸ

ಬದ್ಧವಾಗಿಲ್ಲದಿರುವುದಕ್ಕೂ ಇತರ ಕಂದಪದ್ಯಗಳಲ್ಲಿರಬಹುದಾದ ಛಂದೋಭಂಗದೋಷಕ್ಕೂ ನಮ್ಮ ಪಂಡಿತಂಮನ್ಯ ಭ್ರಾತೃಗಳು ಆಕ್ಷೇಪಿಸಬಹುದು. ಆದರೆ ನಮ್ಮ ಯತ್ನದಲ್ಲೇನೂ ಇಲ್ಲ ಇದೇ ಪ್ರಥಮವಾಗಿ ನಮ್ಮ ಸೋದರಿಯರಿಂದ ಬಂದಿರುವುದರಿಂದ ಇದನ್ನು ನಮ್ಮ ಬಂಧುಗಳ ವಶಕ್ಕೊಪ್ಪಿಸಿದರೆ ಅವರು ತಮ್ಮ ಕಾರ್ಯಭಾಹುಳ್ಯದಲ್ಲಿ ಅದನ್ನೇನು ಮಾಡುವರೋ-ಎಲ್ಲಿ ಬಗೆದಿಡುವರೋ-ಸಮಯಕ್ಕೆ ಸರಿಯಾಗಿ ಬರುವುದೋ ಇಲ್ಲವೋ ಎಂಬ ಭೀತಿಯಿಂದ ನಮಗೆ ತಿಳಿದಷ್ಟು ಮಟ್ಟಿಗೆ ಸರಿಪಡಿಸಿ ಮುದ್ರಿಸಲಾಯಿತು. ಅಲ್ಲದೆ ಮುದ್ರಣಕಾರ್ಯವು ಕೂಡ ಅತ್ಯಂತ ತ್ವರೆಯಿಂದ ನಡೆಯುವುದಾಯಿತು. ಹೀಗಾಗಿ ಇದರಲ್ಲಿ ಮುದ್ರಣದೋಷಗಳಿರಬಹುದೆನ್ನುವುದಕ್ಕೂ ಅಡ್ಡಿಯಿರಲಾರದು. ಹೇಗೂ ಇರಲಿ, ನಮ್ಮ ಬಾಂಧವರು ಇದರ ದೋಷವೇನನ್ನೂ ಗಣಿಸದೆ ಗತಿಸಿದವರ ಆತ್ಮಕೃತಿಯನ್ನು ಪ್ರಕಾಶಕ್ಕೆ ತಂದುದೊಂದೇ ಗುಣವಾಗಿ ಭಾವಿಸುವುದಾದರೆ ಇದರಂತೆಯೇ ಇನ್ನುಳಿದ ಗ್ರಂಥಗಳು ಕೂಡ ಪ್ರಕಾಶಕ್ಕೆ ಬರುವುವು.

ಇಂತಹ ಭಗವದ್ಭಕ್ತಿ ಪರವಾದ ಉತ್ಕೃಷ್ಟ ಪ್ರಬಂಧವನ್ನು ನಮ್ಮ ಚಂದಾದಾರರಿಗೆ ಕಾಣಿಕೆಯಾಗಿ ಕೊಡುವುದು ಉಚಿತವೆಂದು ಭಗವತ್ಪ್ರೇರಣೆಯಾದುದರಿಂದ ಆ ಗೋಪಾಲಕೃಷ್ಣನ ಅಂಕಿತದಿಂದಲೇ ಇದನ್ನು ಪ್ರಕಾಶಕ್ಕೆ ತಂದಿರುವೆವು. ಆಪದೋದ್ಧರಣನೂ, ತಾಪನ್ನಿವಾರಣನೂ, ದ್ರೌಪದೀ ಮಾನಸಂರಕ್ಷಕನೂ ಆದ ಗೋಪಾಲಕೃಷ್ಣನೇ ನಮ್ಮನ್ನು ಕಾಪಾಡುವ ಕೃಪಾಳುವೆಂದು ನಂಬಿ, ಸರ್ವಕಾಲವೂ ಆ ಪ್ರಭುವರನ ಚರಣಾರವಿಂದವನ್ನೇ ಸ್ಮರಿಸುತ್ತ. ನಮ್ಮೀ ಕೃತಿಯಲ್ಲಿ ಸಹಾಯಕನಾಗಿರೆಂದು ಪ್ರಾರ್ಥಿಸುತ್ತ ವಿರಮಿಸುವೆವು.

ಮಾರ್ಗಶಿರ ಶುದ್ಧ ಪೂರ್ಣಿಮಾ<br>ನಂಜನಗೂಡು. } ಇತಿ, ಸಂ|| ನಂ|| ಮತ್ತು ಹಿ.

ಶ್ರೀ.

ಕೃಷ್ಣಸಮಃ.

# ದ್ರೌಪದೀವಸ್ತ್ರಾಪಹರಣ

ಎಂಬ

## (ಅಕ್ಷಯಪ್ರದಾನ ವಿವರಣಗ್ರಂಥವು.)



" ಮೂಕಂ ಕರೋತಿ ವಾಚಾಲಂ ಪಙ್ಗುಂ ಲಂಘಯತೇ ಗಿರಿಮ್ |
ಯತ್ಕೃಪಾ ತಮಹಂವಂದೇ ಪರಮಾನಂದ ಮಾಧವಂ || "

ರಾಗಾ

ರಾಜಾಧಿರಾಜ ಮಹಾ-ರಾಜಾ ಕರುಣಿಸುನೀನು | ರಾಜಾಧಿ ರಾಜ ಯದುರಾಜಾ-ಬೇಡುವೆನಾನು ||ಪ|| ಕಮಲಾಪ್ತನ ಸುತನಿಗೊಲಿದೆ-ಕಮಲಾಪ್ತನ ಸುತನಮುರಿದೆ | ಕಮಲಾಪ್ತನ ಮಾನಕಾಯ್ದೆ-ಕಮಲಾಕ್ಷಿಯ ಮಾನಕಳೆದೆ || ರಾಜಾಧಿ ||೧|| ಶರಧೀ ಜಾಮಾತನಾದೆ | ಶರಧೀಯಮೇಲೆ ಮಲಗಿದೆ | ಶರಧಿಯಲಿ ವಾಸವಾದೆ | ಶರಧಿಯ ಭಂಗಿಸಿದೆ ||ರಾಜಾಧಿ ||೨|| ಶಕಟನ್ನ ಕಾಲಿಲೊದೆದೆ | ಶಕಟನ್ನ ಭೂಮಿಗೆತುಳಿದೆ-ಶಕಟಾದಿಂ ಭಂಗಿಸಿದೆ | ಶಕಟವ್ಯೂಹದಿಮೆರೆದೆ ||ರಾಜಾಧಿ ||೩|| ಧಣಿಯೆಂದು ನಂಬಿದವಗೆ-ದಣಿವಂತೆ ಭಾಗ್ಯವಿತ್ತೆ | ಧಣಿಯೆಂದು ನಂಬದವಗೆ-ದಣಿವಂತೆ ಶೋಕವಿತ್ತೆ ||ರಾಜಾಧಿ ||೪|| ದಾಸಾನುದಾಸ ಬಡ-ದಾಸ ಕೂಗುವೆನೆಂದು-ಶೇಷಗಿರೀಶಬಂದು|ಪೋಷಿಸು ಭಕ್ತಬಂಧು ||ರಾಜಾಧಿ ||೫||

ವಚನ॥ ಈ ಪ್ರಕಾರ ಇಷ್ಟದೇವತಾ ಪ್ರಾರ್ಥನೆಯನ್ನು ಮಾಡಿ, ಲಕ್ಷ್ಮೀದೇವಿಗೆ ವಂದಿಸಿ, ಅನಲಸಖಿಂಗೆರಗಿ, ಸರಸ್ವತೀದೇವಿಯ ಪಾದಪದ್ಮಗಳನ್ನು ನೆನೆದು, ಉಮಾಪತಿಗೆ ನಮಿಸಿ, ಸಿದ್ಧಿವಿನಾಯಕನನ್ನು ನೆನೆದು, ಇಷ್ಟಾರ್ಥವನ್ನು ನೆರವೇರಿಸೆಂದು ಅಡಿಗೆರಗಿ, ಜನಮೇಜಯರಾಯನಿಗೆ ವೈಶಂಪಾಯನನು ಪೇಳಿದ ಭಾರತಸಭಾಪರ್ವಕಥಾಸಾರದೊಳು ಭಗವಂತನು ದ್ರೌಪದಿಯ ಮಾನಸಂರಕ್ಷಣೆಯನ್ನು ಮಾಡಿದ ಚರಿತ್ರೆಯನ್ನು ಪ್ರಾಕೃತಭಾಷೆಯೊಳು ಯಕ್ಷಗಾನ ಪದಸಂಗೀತ ರೂಪಕವಾಗಿ ಸಜ್ಜನರ ಚರಣಸೇವಕನು ಪೇಳುವ ಬಗೆ-

ರಾಗ—(ಹಾಡು)

ಹರಿನಾಮವೊಂದೇಸಾಲದೆ – ನರ – ಹರಿನಾಮವೊಂದೇಸಾಲದೇ || ಪ || ದುರುಳಾನನುಜ ಸೀರೆ ನೆರಿಗೆಯ ಸುಲಿಯಲು | ತರಳೆಯು ಕೂಗಿದ ನಾಮಾ||ಹರಿನಾಮ ||೧|| ಪತಿಗಳಯ್ವರುಸತ್ಯ-ವ್ರತದಿಸುಮ್ಮನಿರಲು | ಹಿತದಿ ಬಂದೊದಗಿದನಾಮಾ ||ಹರಿ ||೨|| ಕಷ್ಟಗಳೋಡಿಸಿ-ದಿಟ್ಟೆದ್ರೌಪದಿಗೆ|ಇಷ್ಟವಸಲಿಸಿದ ನಾಮಾ ||ಹರಿ ||೩|| ಪಾಂಡುಸುತರೆಭೂ-ಮಂಡಲಾಧಿಪರೆಂದು | ಕೊಂಡಾಡಿಸಿದ ದಿವ್ಯನಾಮಾ||ಹರಿ ||೪|| ವಾಸುಕಿಶಯನನೆ-ದೋಷರಜಿತ ನಮ್ಮ |ಶೇಷಗಿರೀಶನೆಂಬೊ ನಾಮಾ||ಹರಿ||

ವಚನ॥ ಈ ಪ್ರಕಾರ ಇಂದ್ರಸಭೆಯಲ್ಲಿ ನಾರದರು ಪೇಳಿದ ವಾಕ್ಯವನ್ನು ವೈಶಂಪಾಯನಋಷಿಗಳು ರಾಯನಿಗೆ ಹೇಳಲು ಜನಮೇಜಯರಾಯನು ಆಶ್ಚರ್ಯಪಟ್ಟವನಾಗಿ ಪ್ರಶ್ನೆ ಮಾಡುವ ಬಗೆ-

ಕಂದ|| ತರಳೆಯ ನೆರಿಪಿಡಿದೆಳೆಯಲು | ಧರೆಯೊಳಗಾದುರುಳಬೇರಬಲ್ಲನೆ ಖೋಡೀ || ನರಸಹದೇವನಕುಲರಾ | ಧುರಧೀರ-ಭೀಮನುಸುಮ್ಮನಿದ್ದರೆ ನೋಡೀ ||೧||

ಕಂದ|| ಎಲ್ಲಿದ್ದಕೃಷ್ಣದೇವರು | ಬಲ್ಲಿದರವರ್‍ವೈವರೇನುಮಾಡುತಲಿದ್ದರ' || ಚಲ್ವೆಯ ಕರಪಿಡಿದೆಳೆದಾ|ಖುಲ್ಲನಪೆಸರೇನುಎನಗೆಪೇಳುವನಾರು||

ಕಂದ|| ಸತ್ಯದಿಮೌನದೊಳಿರುತಿರೆ | ಉತ್ತಮಪತಿವ್ರತೆಯಸೀರೆಸುಲಿದವರುಂಟೇ || ಚಿತ್ತಜಪಿತಶ್ರೀಕೃಷ್ಣನ | ಭೃತ್ಯರುಪಾಂಡವರುಆವರಿಗಪಜಯವುಂಟೇ ||

ಕಂದ|| ಹರಿನಾಮಸೂರ್ಯತನಯನ | ಧೊರೆವೈರಿಯರಾಣಿಯನ್ನು ಸಲಹಿದ ಕಥೆಯಂ | ಕರುಣದಿಪೇಳ್ವೈ ಮುನಿವರ | ಚರಣಕ್ಕೆ ವಂದಿಸುವೆನೆಂದು ಬೇಡಿದ ರಾಯಂ || ೪ ||

ವಚನ|| ಈ ಪ್ರಕಾರ ರಾಯನು ಋಷಿಯನ್ನು ಕುರಿತು ಪ್ರಾರ್ಥನೆಮಾಡಲು, ಆಗ ವೈಶಂಪಾಯನರು ಭಗವಂತನನ್ನು ನೆನೆದು-ಹೇ ರಾಯ, ಕೇಳೆಂದು ಪೇಳುವ ಬಗೆ-

ರಾಗಾ—(ಹಾಡು)

ಪೇಳುವೆ ನಾನು-ಕೃಷ್ಣನಕಥೆ-ಪೇಳುವೆನಾನು || ಪ || ತನ್ನ ನಂಬಿದ ಜನ-ರನ್ನು ಬೆಂಬಿಡನೆಂಬು | ದನ್ನು ತೋರಿದ ಪ್ರಸನ್ನ ಶ್ರೀಶನ ಲೀಲೆ||ಪೇಳುವೆ ||೧|| ಯಾರಾದರಾಗಲಿ | ಕೋರಿಭಜಿಸುವರ | ಸೇರಿ ಪೊರೆವ ಮುರಾರಿಚರಿತೆಗಳ||ಪೇಳುವೆ ||೨|| ದೋಷರಹಿತ ನಮ್ಮ-ಶೇಷಗಿರೀಶನು | ದಾಸರ ಸಲಹಿದ ವಾಸುದೇವನಮಹಿಮೆ || ಪೇಳುವೆ||೩||

ವಚನ|| ಈ ಪ್ರಕಾರ ವೈಶಂಪಾಯನರು ಭಗವಂತನ ಚರಿತೆಪೇಳಬೇಕೆಂದಿಚ್ಛೈಸಿ, ರಾಯಕೇಳೆಂದು ಮುಂದಿನ ಕಥಾ

ಭಾಗವನ್ನು ಹೇಳುವರು. ಧರ್ಮರಾಯನು ಇಂದ್ರಪ್ರಸ್ಥಪ ಟ್ಟಣದಲ್ಲಿ ರಾಜಸೂಯಾಗವನ್ನು ಮಾಡಿದ ಬಳಿಕ ಕೆಲವು ದಿನ ಗಳಮೇಲೆ, ಹಸ್ತಿನಾಪುರದಲ್ಲಿ ಒಂದುದಿನ ಧೃತರಾಷ್ಟ್ರರಾಯನ ಸಭೆ ತುಂಬಿರಲು, ದ್ರೋಣ, ಭೀಷ್ಮ, ಕೃಪ, ಅಶ್ವತ್ಥಾಮರೂ ದುರ್ಯೋಧನ–ದುಶ್ಶಾಸನ–ಶಕುನಿ–ಕರ್ಣಸೈಂಧವ ಮೊದಲಾದ ವರೂ ನೆರೆದಿರಲು, ಬ್ರಾಹ್ಮಣರಸಭೆ ತುಂಬಿರಲು, ರಾಜಸೂ ಯಾಗದಲ್ಲಿ ಸಂತೋಷಪಟ್ಟ ಬ್ರಾಹ್ಮಣರು ರಾಜಸೂಯಾಗದ ಸಂಭ್ರಮವನ್ನು ರಾಯನ ಸಭೆಯಲ್ಲಿ ಕೊಂಡಾಡುವ ಬಗೆ-

ರಾಗಾ—(ಹಾಡು)

ರಾಜಸೂಯಾಗವ–ಮಾಡಿದಮಹರಾಯ ‖ ರಾಜಮಾರ್ತಾಂ ಡನು–ರಾಜಶಿಖಾಮಣಿ ‖ಪ‖ ಇಂದ್ರನ ಸಭೆಯಂತೆ ಸಭೆಯ ನಿರ್ಮಿಸಿ ದನು ‖ ಬಂದವಿಪ್ರರಿಗೆಲ್ಲ ಬಹುಧನನೀಡಿದ|ತಂದೆಯ ಸ್ವರ್ಗದಿ ಪೂಜ್ಯ ನೆಂದೆನಿಸಿದ ‖೧‖ ಸುರನರಲೋಕಕ್ಕೆಲ್ಲ–ಹರುಷವ ತೋರಿದ | ಧರೆಪತಿ ಗಳಿಗೆಲ್ಲ ಅಧಿಕತಾನೆಂದು ಮೆರೆದ | ಕರು–ತುರುಗಳ ದಶ ಲಕ್ಷ ಲಕ್ಷವ ಕೊಟ್ಟ ‖ ರಾಜ ‖೨‖ ಕಪ್ಪವಕೊಂಡನು – ದಿಗ್ದೇಶದೊಳು ತಾನು | ಎಪ್ಪತ್ತುಖರ್ವದ್ರವ್ಯ–ಬೊಕ್ಕಸ ತುಂಬಿದನು | ಸರ್ಪಭೂಷಣಮೆಚ್ಚಿ ಹರಿಯಕೊಂಡಾಡಿದನು ‖ ರಾಜ ‖೩‖ ಅಲ್ಲಲ್ಲಿ ಋಷಿಗಳು–ಬಲ್ಲಿದ ನೃಪಕೂಟ | ಫುಲ್ಲಲೋಚನೆಯರ–ಚಲ್ಲಕಂಗಳನೋಟ ‖ ಎಲ್ಲಿ ನೋಡಿದ ರಲ್ಲಿ–ಕೃಷ್ಣನ ಓಡ್ಯಾಟ ‖ ರಾಜಸೂ ‖೪‖ ವಾಸವಾದಿಗಳೆಲ್ಲ–ನೆರೆದ ರಂಬರದೊಳು | ದಾಸನಾರದವೀಣಾಗಾನವ ಮಾಡಲು | ಶೇಷಗಿರೀಶ ನಮ್ಮ–ಕೇಶವಸುಖಿಸಲು ‖ ರಾಜಸೂ ‖೫‖

ವಚನ ‖ ಈ ಪ್ರಕಾರ ಬ್ರಾಹ್ಮಣರು ಧರ್ಮರಾಯನ ನ್ನು ಕೊಂಡಾಡಲು, ಭೀಷ್ಮಾದಿ ಸಜ್ಜನರು ಸಂತೋಷಪಡಲು,

ದುರ್ಜನರಾದ ದುರ್ಯೋಧನ, ಶಕುನಿ, ಕರ್ಣ-ಸೈಂಧವ ಮೊದಲಾದವರು ಚಿಂತಾಕ್ರಾಂತರಾಗಿ ತಲೆಬಾಗಿ ಏಕಾಂತ ಸ್ಥಳವನ್ನು ಸೇರಿ ಏನು ಮಾಡುವ-ಎಂದು ಬಗೆಹರಿಯದೆ ಕುಳಿತು ಯೋಚಿಸುತ್ತಿರಲು, ದುರ್ಯೋಧನನು ಶಕುನಿಯನ್ನು ನೋಡಿ-ಹೇಳುವ ಬಗೆ-

(ಹಾಡು)

ಮಾನವಗೊಂಡರು ಪಾಂಡುಪುತ್ರರು--ದೀನನಾದೆನಾಸಭೆಯಲ್ಲಿ| ಮಾನಿನಿದ್ರೌಪದಿ ನಗುತಿದ್ದಳು ನಾ-ನೇನಮಾಡಲಾವೇಳೆಯಲಿ || ಪ || ಜಲವಿದ್ದ ಸ್ಥಳದಲಿ ಜಲವಿರದ-ಜಲವಿಲ್ಲದ ಸ್ಥಳದಲಿ ಜಲವಿಹುದ|ಜಲಜಮುಖಿಯರೆಲ್ಲರು ಕುಂಬಿಹರಾಜಲದೊಳು ನಾಬಿದ್ದೊರಳಿದುದಾ-ಕಳವಳಿಸುತಲೆದ್ದೆನು ನೋಡುತ ಘೊಳ್ಳೆಂದು ನಕ್ಕರವರಿಗೆ ಮೋದಾ||೧||ಕದವಿದ್ದ ಸ್ಥಳದಲಿ ಕದವಿರದ-ಕದವಿಲ್ಲದಸ್ಥಳದಲಿ ಕದವಿಹುದಾ | ಅದನರಿಯದೆ ನಾನಡೆದು ಗೋಡೆಗಪ್ಪಳಿಸಿ ಬಿದ್ದೆ ಕೇಳು ವಿನೋದ || ಚದುರರೆಲ್ಲರು ಹಾಸ್ಯಮಾಡಿದರಾ ನಿದಕೆ ಬದಲು ಮಾಡುವೆ ಬೇಗ || ೨ || ದಾಸಿಯಕೆಲಸದಿ ನಿಲಿಸಲುಬೇಕು ಪಾಂಚಾಲಿಯ ಉಪಾಯಪೇಳೆಂದು | ಆಸರವಡಗದು ಆಪರಿಯಂತರ ಲೇಸಾಗುವದೆ ಎಮಗೆಲೊ ಎಂದು | ಶೇಷಗಿರೀಶನು ದ್ವಾರಕಿಗೈದಿಹ ದೋಷವಿಲ್ಲ ನುಡಿನುಡಿಯೆಂದು ||೩||

ವಚನ || ಈ ಪ್ರಕಾರ ದುರುಳನಾದ ದುರ್ಯೋಧನನು ಕಳಿಂಗನೊಡನೆ ಸಂತಾಪದಿಂದುಸುರಲು, ಈ ಕಾರ್ಯಕ್ಕೇನಾದರೊಂದು ಉಪಾಯಪೇಳೆಂದು ಕರ್ಣನು ಉಪಚರಿಸಲು ಕಳಿಂಗನು ಪೂರ್ವವೃತ್ತಾಂತವನ್ನು ನೆನೆದು ದುರುಳನ ಮನಸ್ಸಂತೋಷವಾಗುವ ಹಾಗೆ ನುಡಿದ ಬಗೆ-

ರಾಗಾ—(ಏನಗೈದರೇನು ನಿನ್ನ)

ಇದಕೆಯೋಚಿಸುವರೆ ಮಹಾರಾಯಸೀನಲಾ—ಒಂದುಪಾಯ ಮುಂಟೆಲಾ ||ಪ|| ಸಭೆಯ ಮಾಡಿ ಪಾಂಡು ಸುತರ ಕರೆಸು ಬೇಗದಿ | ಆವರು ಬರಲಿ ಮೋದದಿ ||೧|| ಪಗಡೆಯಾಡಿ ಸೋಲಿಸುವೆನು ಮಾನ ಗೊಂಡರಾ ಆ ದುರುಳರೆಲ್ಲರಾ ||೨|| ದಾಸಿಕೆಲಸಕಿಡುವೆ ಪಾಂಚಾಲ ಸುತೆಯಳಾ | ನಿನಗೆ ದೋಷವಿಲ್ಲೆಲಾ ||೩|| ಬೊಪ್ಪನವರಿಗರುಹಿ ಸ ಮ್ಮತಿಯಪಡಿಸೆಲಾ | ಮಾತೆಯಳಿಗೆ ಪೇಳೆಲಾ ||೪|| ಭೀಮಮುನಿದರ ವನಭಯವು ನಿನಗೆ ಇಲ್ಲೆಲಾ-ನಾನಿರುವೆ ಕೇಳೆಲಾ ||೫|| ಧರ್ಮಸುತ ನ ವೀರಿಪಾರ್ಥ ನಡೆವನಲ್ಲಲಾ-ಇದರ ಮರ್ಮಬಲ್ಲೆಲಾ||೬||ಹುಡುಗ ರಿಬ್ಬರಧಟು ನಮಗೆ ಎಣಿಕೆಯಿಲ್ಲೆಲಾ | ಅವರಗಣನೆಯಿಲ್ಲೆಲಾ ||೭|| ಕುಂತಿ ಹಿರಿಯಮಗನು ಆಟಕೊದಗಿ ಬಹನೆಲಾ—ನೀನು ಪಂಥವಾಡೆ ಲಾ || ೮ || ಶೇಷಗಿರಿಯ ವಾಸದ್ವಾರಕೀಯೊಳಿರುವನು-ಸಂತೋಷ ಪ ಟ್ಟಿನು || ೯ ||

**ವಚನ॥ ಈ ಪ್ರಕಾರ ಕಳಿಂಗನು ಪೇಳಿದ ವಾಕ್ಯವನ್ನು ದುರ್ಯೋಧನನು ಕೇಳಿ, ಶಕುನಿಯನ್ನು ಸ್ತೋತ್ರಮಾಡಿ ಕಾ ರ್ಯವು ಕೈಕೂಡಿ ಬರುವುದೆಂದು ಧೃತರಾಷ್ಟ್ರರಾಯನ ಅರಮ ನೆಯನ್ನು ಹೊಕ್ಕು ತಂದೆಯನ್ನು ಕಂಡಬಗೆ–**

ರಾಗಾ||—ಹಾಡು

ಬಂದನು ಒಳಮಂದಿರಕೇ-ಅಂಧನೃಪಗೆ ವಂದಿಸಿದ ದುರ್ಯೋಧ ನನೂ | ಮಂದಗಮನೆ ಗಾಂಧಾರಿಯು ಅಲ್ಲಿರೆ ತಂದಿರುವನು ಮಗ ಹೊ ಸಗೆಯನೂ||ಪ||ಲೋಲನಯನೆ ಮಾತನು ಕೇಳುತ-ಭೂಪಾಲನು ಕುವ ರನ ಮನ್ನಿಸುತಾ | ಬಾಲಕರೆಲ್ಲರು ಬಂದಿಹರೇತಕೆ ಕಾರಣ ಪೇಳು ಕೇಳು

ವೆ ಮಾತಾ||೧||ಎಂದ ಮಾತನಾಲಿಸಿ ಮತ್ತೆ ವಂದಿಸಿ ನಿಂದು ನುಡಿದನು ವಿನಯದಲಿ | ಮಂದಭಾಗ್ಯನಾನಿಂದ್ರ ಪ್ರಸ್ಥದಿ ಬಲು ನೊಂದುಬಂದಿಹೆ ನೀವು ಕೇಳಿ ||೨|| ಮಾನಗೊಂಡರಾ ಪಾಂಡುಸುತರು ನಾಪ್ರಾಣಬಿಡುವೆ ಅಪ್ಪಣೆ ನೀಡೀ | ಹೀನತನದಿ ಜೀವಿಸಲರಿಯೆನು-ಇನ್ನೇತಕೆ ಪುತ್ರರಾಸೆಯನ್ನು ಬಿಡಿ ||೩|| ಮಕ್ಕಳು ಬೇಕೆಂದರೆ ನೀವ್ ತಮ್ಮನ ಮಕ್ಕಳ ಕರೆಯಿಸಿರಿ ಮರೆಯದೆ ಈಗ | ತಕ್ಕೌಷಧಿಯೆನು ಮಾಡಿಸಿಯಿರುವೆ ಬಹು ಕಕ್ಕಸಭಟರಿಗಿಕ್ಕುವೆ ಬೇಗ ||೪|| ನುಡಿಗೇಳುತ ಗಡಗಡನಡುಗುತಲಾ ಪೊಡವಿಪತಿ ಮೂರ್ಛೆಯಸಾರೇ | ಮಡದಿಯು ಕುರುಡಿಸಿ ಉಪಚರಿಸಲು ಅದುರುತಲಂಧನು ಬಾಯಾರೇ ||೫|| ಬೊಪ್ಪನವರ ಕೃಪೆಯಿಲ್ಲವು ನಮಗೆ ಅಪ್ಪಣೆಯೇನು ನುಡಿನುಡಿಯಿರೆನಲೂ | ಅಪ್ಪಬಾರೋ-ಎಂದಪ್ಪುತ ಶೇಷಗಿರೀಶನ ನೆನೆನೆನೆಯುತ ಕುರುಡಿಸಿದಾ (?) ||೬||

ವಚನ || ಈ ಪ್ರಕಾರ ದುರ್ಯೋಧನನಾಡುವ ವಾಕ್ಯವನ್ನು ಕೇಳಿ ಪುತ್ರಸ್ನೇಹದಿಂದ ಮನಮರುಗಿ ಮಾತನಾಡುವ ಬಗೆ-

ಗೀತೆ|| ಏನುನೆನೆದಿಹೆ-ಮಗನೆಪೇಳೆಲೊ | ನಾನುಮಾಡಿಸಿ ಕೊಡುವೆಕೇಳೆಲೊ ||ಪ|| ಪಾಂಡುಪುತ್ರರ ಕರೆಸುವೆನೆಲೊ | ಅಖಂಡಲಾತ್ಮಜ ಸಾಮಾನ್ಯನಲ್ಲೆಲೊ ||೧|| ಭೀಮನಿದಿರೆ ಸುತ್ರಾಮನಿಲುವನೆ | ಭೂಮಿಪಾಲ ಧರ್ಮರಾಯ ಅಜಿತನೇ ||೨|| ಅವಳಿ ಮಕ್ಕಳು ಕುಹುಕವರಿಯರು | ಹವಳಿಕಾರರು-ದ್ರೋಹಮಾಪ್ಪರು ||೩|| ಕರ್ಣಶಕುನಿಯಾ-ಮಾತಕೇಳದೆ | ಕರ್ಣೆದ್ರೌಪದೀ ಗೊಡವೆಪೋಗದೆ ||೪|| ಶಾಂತಮೂರ್ತಿಯಾ ಯಮಜಕೇಳೆಲೊ | ಪಂಥಮಾಡಿದೇ-ಕೇಡು ನಿನಗಿದು ||೫|| ಪುತ್ರರಜಿತನು ಎನಿಸಿಕೊಂಬೆನು | ಮಿತ್ರವಿದುರನಾ ನುಡಿಯಪೇಳ್ವೆನೂ||

ತರುಣಿಪೇಳಲೇ-ಬುದ್ಧಿಮಗನಿಗೆ | ಕರುಣಿ ಕೃಷ್ಣನು ಹೊಣೆಗಾರನವರಿಗೆ ||೭|| ವ್ಯರ್ಥ್ಯವಾಗಿ ಪ್ರಾಣಗಳ ಬಿಡುವರು | ಅನರ್ಥಸಾಧಕಾನೆಂದು ಅರಿಯರು ||೮|| ಶೇಷಗಿರಿಯವಾಸನ್ನ ದಾಸರು | ಲೇಸುಪಡೆವರು ಘಾಸಿಯಾಗರು ||೯||

ವಚನ || ಈ ಪ್ರಕಾರ ಧೃತರಾಷ್ಟ್ರರಾಯನು ಕಣ್ಣಿನಿಂ ಜಲಬಿಂದುಗಳುದುರುತ್ತಿರಲು ಗದ್ಗದ ಸ್ವರದಿಂದ ಮಗನಿಗೆ ಬುದ್ಧಿವಾದಗಳನ್ನು ಹೇಳಲು ಅದಕ್ಕಾತನು ತಂದೆಗೆ ವಂದಿಸಿ 'ನಾವು ನೂರ್ವರೂ ನಡುವಿನೊಳು ಬಿದ್ದು ಪ್ರಾಣಬಿಡುವೆವೆಂದು ಅಪ್ಪಣೆಯನ್ನು ಬೇಡಲು ಅಂಧನೃಪನು ಪುತ್ರಮೋಹದಿಂದ ದುಷ್ಟನ ಮಾತನ್ನು ಅಂಗೀಕರಿಸಿದ ಬಗೆ---

ದ್ವಿಪದೆ *

ಏನಪೇಳುವೆ ವಿಚಿತ್ರದಕಥೆಯ ಮಹರಾಯ | ಪುತ್ರಮೋಹವು ಪಿತಗೆ ಎಷ್ಟು ವರ್ಣಿಸಬಹುದು || ಮಗನಮಾತಿಗೆ ಒಡಂಬಟ್ಟು ಅಂಧನೃಪಾಲ | ಸಭೆಮಾಡಿ ಪಾಂಡುಪುತ್ರರ ಕರೆಸಿ ತಹೆನೆನಲು || ಬಂದ ದುರ್ಯೋಧನನು ಶಕುನಿ ಯಿದ್ದೆಡೆಗಾಗಿ | ಕರ್ಣಸೈಂಧವರನ್ನು ಕರೆಸಿದನು ಬೇಗ || ತಂದೆ ಸಮ್ಮತಿಯಾದುದೆಲ್ಲವರಿಗು ಸುರಿದನು || ಹರುಷಪಟ್ಟರು ದುರುಳರೆಲ್ಲಗುಂಪಾಗಿ ತಾವ' | ಮಂಟಪವ ಶೃಂಗಾರಮಾಡಿಸಿದ ರಾಕ್ಷಣದಿ | ರಜತದಲಿ ಗೋಡೆಗಳ ಭಂಗಾರ ಸ್ತಂಭಗಳು | ವಜ್ರದಲಿ ಸೋಪಾನ ಕಟ್ಟಿದ ಸರೋವರವು || ಮಾಣಿಕದ ಗದ್ದುಗೆಯು

* ಇಲ್ಲಿ ಪ್ರಾಸನಿಯಮವಾಗಲೀ-ಶಬ್ದಾಲಂಕಾರವಾಗಲಿ-ಇಲ್ಲವೆಂದು ನಮ್ಮವಾಚಕರು ಆಗ್ರಹಿಸಬಹುದು ; ಆದರೆ, ಇದು ಪ್ರಕಾಶಕರ ತಪ್ಪಲ್ಲ. ಕಾವ್ಯಕಾರರು ಗತಿಸಿರುವುದರಿಂದ ಈ ವಿಚಾರದಲ್ಲಿ ಕೇವಲ ಕಥಾಸಾರವನ್ನು ಮಾತ್ರವೇ ಗಮನಿಸಬೇಕಲ್ಲದೆ ಆಕ್ಷೇಪಿಸಬಾರದಾಗಿದೆ. ಸಂ|| ನಂ.

ಕಾಣೆನದರ ಸಮಾನ | ಸಾಲುಮಣಿಪೀಠಗಳು ತಂದಿರಿಸಿದರು ಅಲ್ಲಿ | ಮುತ್ತಿನಾಝೂಲರಿಯು ಅಲ್ಲಲ್ಲಿ ಹೊಂದಿಹುದು | ನೀಲಮಣಿಪೋಣಿಸಿಹ ತೋರಣವು ಬಿಗಿದಿಹುದು || ಸ್ಫಟಿಕದಾಹಲಗೆಗಳು ದಾರಿಯಲಿ ಹಾಸಿಹವು | ಗೋಮೇದಿಕದ ಕದವನಿಲಿಸಿಹುದು ಮನೆಮನೆಗೆ | ಪುಷ್ಯರಾಗದಿ ನಿಲುವು ಶೃಂಗಾರವಾಗಿಹುದು | ಅಪ್ಸರಸ್ತ್ರೀಯರನು ಧಿಕ್ಕರಿಪ ನಾರಿಯರು | ಅಲ್ಲಲ್ಲಿ ಗಿಂಡಿಗಳ ಪಿಡಿದು ನಿಂದಿಹರಾಗ | ಚಿತ್ರಗಳ ಬರೆದಿರುವ ರಾಗೋಡೆಗಳ ಮೇಲೆ || ಕಳಶಕನ್ನಡಿ ಪಿಡಿದು ನಿಂದಿಹರು ನಾರಿಯರು | ಉಪಚರಿಸುವಂತಿಹವು ಭಂಗಾರಪ್ರತಿಮೆಗಳು || ಘಮಘಮಿಸುವುದು ಅಲ್ಲಿ ಪರಿಮಳದ್ರವ್ಯವಿಟ್ಟಿಹರು||ರಾಯರಿಗೆಲುಡುಗೊರೆಯಸಿದ್ಧ ಮಾಡಿರುವರಾ| ಇಂದ್ರಪ್ರಸ್ಥದ ಸಭೆಯನಾಚಿಸುವುದೀಸಭೆಯು || ಪಟ್ಟಣದ ಶೃಂಗಾರ ವಾಯಿತಾವೇಳೆಯಲಿ | ಮನೆಮನೆಯ ಬಾಗಿಲೊಳು ಗೊನೆಬಾಳೆಕಟ್ಟಿಹುದು | ಹೊಂಬಾಳೆಯಡಿಕೆ ಗೊನೆ ಶೃಂಗಾರವಾಗಿಹುದು || ಗುಗ್ಗುಳದ ಧೂಪಗಳು ಪಟ್ಟಣವ ತುಂಬಿಹುದು|ನಡಮಡಿಯ ಹಾಸಿಹರು ಬೀದಿಬೀದಿಗಳಲ್ಲಿ|ಸರ್ವರೂ ಅಲಂಕೃತರಾಗಿಹರು ಪುರದಲ್ಲಿ || ದ್ರೋಣಭೀಷ್ಮರು ವಿದುರರೀಮಾತಕೇಳಿದರು | ಕೆಟ್ಟಿತೀಕಾರ್ಯವೆಮ್ಮನುಡಿಗೇಳದುರುಳ | ಅಂಧನೃಪ ಕೆಡಿಸಿದನು ನಮಗೇಕೆ ಈ ಚಿಂತೆ || ಹರಿಯಸಂಕಲ್ಪವಿದ್ದಂತೆ ನಡೆಯುವುದೀಗ | ಮುಂದೆ ಬಹುಕಾರ್ಯಗಳು ನಡೆಯಬೇಕಿದರಿಂದ | ಬಲುಕಂಟಕನು ಪಾಪಿ ದುರುಳದುರ್ಯೋಧನನು || ಎಂದು ಯೋಚಿಸುತ್ತಿರೆ ಸಜ್ಜನರು ಮನದಲ್ಲಿ|ಬಂದನಾದುರ್ಯೋಧನನು ಪಿತನ ಬಳಿಗಾಗಿ || ಪಟ್ಟಣವಸಿಂಗರಿಸಿದೆನಪ್ಪಣೆಯಮೇರೆ | ಸಭೆಯ ನಿರ್ಮಿಸಿಹೆನವರಸಭೆ ಗಿಮ್ಮಡಿಯಾಗಿ || ಕರೆಯಿಸಿರಿ ಮಕ್ಕಳನು ಪಗಡೆಯಾಡಲುಬೇಕು || ಕೇಳುತಿಳೆ ನಿಮ್ಮ ಮನಕಾನಂದ ಪಡಿಸುವೆನು || ಎಂದು ಪೇಳಲು ಅಂಧ ನಿ

2

ಟ್ಟುಸಿರು ಬಿಡುತಾಗ | ಕರಣಿಕರಕಯ್ಯಿಂದ ಪತ್ರವನು ಬರೆಯಿಸಿದ || ಉಡುಗೊರೆಯು ಮುಂತಾದ ವಸ್ತುಗಳಕಟ್ಟಿಸಿದ | ಧರ್ಮಜನ ಬಳಿಗಾಗ ಕಳುಹಿದನು ಮಂತ್ರಿಗಳ | ಪಯಣದಲಿ ಬಂದರಿಂದ್ರಪ್ರಸ್ಥಪುರವರಕೆ || ಧರ್ಮರಾಯನ ಕಂಡು, ಓಲೆ-ಉಡುಗೊರೆಕೊಡಲು || ಬೊಪ್ಪ ಕಳುಹಿದನೆಂದು ಸಂತೋಷಪಡುತಧೊರೆ | ಕರಣಿಕರ ಕರೆದಿತ್ತನಾ ಪಿತನ ಪತ್ರವನು || ಶೇಷಗಿರಿವಾಸನ್ನದಾಸ ಜನಮೇಜಯನೆ | ಪೇಳ್ವೆ ಕೇಳಿನ್ನು ಮುಂದಿನ ಕಥಾಸಾರಮಂ ||

ವಚನ|| ಈ ಪ್ರಕಾರ ಧೃತರಾಷ್ಟ್ರರಾಯನು ಕಳುಹಿದ ಚಾರರು, ಧರ್ಮರಾಯನಿಗೆ ಪತ್ರವನು ತಂದೊಪ್ಪಿಸಲು,ರಾಯನು ಆನಂದ ಭರಿತನಾಗಿ ಭೀಮಾರ್ಜುನ ನಕುಲ ಸಹದೇವ ದ್ರೌಪದಿಯರನ್ನು ಕರೆಯಿಸಿ ಮಾತೆಯ ಸಮ್ಮುಖದಲ್ಲಿ ಪತ್ರವನ್ನು ವಾಚಿಸುವ ಬಗೆ—

ರಾಗಾ—(ಹಾಡು)

ಸ್ವಸ್ತಿ ಶ್ರೀಮತು ಮಹಾರಾಜಧರ್ಮಜನಿನಗೆ | ಅರ್ಥಿಯಲಿ ಬರೆದೆ ಆಶೀರ್ವಾದಪತ್ರಿಕೆಯು ||ಪ|| ರಾಜಸೂಯಾಗವನು ಮಾಡಿದಾ ಸಂಭ್ರಮವು | ರಾಜ್ಯದಿಂದಲಿ ಕೇಳಿಸುಖವಾಯ್ತು ಮನವು ||೧|| ಸಭೆಯ ವರ್ಣನೆ ಕೇಳಿ ಸಂತೋಷಪಟ್ಟೆನಾ | ತ್ರಿಭುವನದೊಳಗಿಲ್ಲೆಂದು ವರ್ಣಿಸಿದರದನಾ ||೨|| ನಿನ್ನ ಪೋಲುವ ದೊರೆಗಳಾರಿಹರು ಧರೆಯೊಳಗೆ | ಎನ್ನ ತಮ್ಮನ ಪುಣ್ಯ ಸಫಲವಾಯ್ತಾಗ ||೩|| ಭೀಮಪಾರ್ಥರ ಸಮವು ಇಲ್ಲ ಮೂಲೋಕದೊಳು|ಕಾಮಜನಕನೆ ನಿನ್ನ ಮೈದುನನು ಕೇಳು ||೪|| ಭೂಲೋಕದಿಂದ್ರ ನೀನೆಂದು ಕೊಂಡಾಡುವರು | ಶ್ರೀಲೋಲನೊಲಿದಿರುವ ಕಂದಮರೆಯದಿರು ||೫|| ಹಸ್ತಿನಾಪುರದಲ್ಲಿ ರಚಿಸಿ

ರುವ ಮಗತಾನು | ಹಸ್ತಿವಾಹನ ಸಭೆಗೆ ಮಿಗಿಲೆಂಬರದನು ||೬|| ನಿನ್ನೊಡನೆ ಕೇಳಮೇಳದಲಿರಲಿ ಬೇಕೆಂದೂ |ಎನ್ನಸುತನಭಿಲಾಷೆ ಪಡುವ ಗುಣ ಸಿಂಧೂ ||೭|| ಭೀಮಪಾರ್ಥನು ನಕುಲಸಹದೇವ ಸಹಿತ | ಪ್ರೇಮದೊಳು ಬಂದು ಅರ್ಥಿಯ ಸಲಿಸುದಾತಾ ||೮|| ಶೇಷಗಿರಿವಾಸ ಕೈವಶವಾಗಿಹನು ನಿನಗೆ | ಲೇಸುಪಾಲಿಸುವ ಕೈ ಮುಗಿವೆ ಕೇಶವಗೆ ||೯||

ವಚನ|| ಈ ಪ್ರಕಾರ ವಾಚಕಾಭಿಪ್ರಾಯವನ್ನು ಧರ್ಮರಾಯನು ಕೇಳಿ ಆನಂದಭರಿತನಾಗೆ, ಭೀಮ,ಪಾರ್ಥ, ನಕುಲ, ಸಹದೇವರು ಕಳವಳಗೊಂಡು ಸುಮ್ಮನಿರುವರಾಕಾಲದಲ್ಲಿ ದ್ರೌಪದಿಯು ಮನನೊಂದು ಅಯ್ವರು ಪತಿಗಳನ್ನೂ ನೋಡಿ ಮಾತನಾಡುವ ಬಗೆ---

ರಾಗಾ—(ಹಾಡು) ( ರಾಜಾಧಿರಾಜನೆ )

ಸ್ವಪ್ನವ ಕಂಡೆನಲ್ಲ | ತಪ್ಪದೆ ಬಂತಲ್ಲ || ಮುಪ್ಪಾಯ್ತು ಸಿರಿಗೆ ನ-ಮ್ಮಪ್ಪನೀ ಕೃಷ್ಣನೆಬಲ್ಲ || ಕಣ್ಣೀರುಸುರಿವುದನು | ಕೆದರಿದ ಓರ್ವ ಕನ್ನೆಯ ಕಲಹವನ್ನು | ಎನ್ನ ಮೈಧೂಳ್ಗಳನ್ನು-ಕೆನ್ನೀಮೇಲೆ ಹೊಯ್ಗಳನ್ನು ||ಸ್ವಪ್ನವ ||೧|| ಸಿರಿನೀಗಿ ನಿಂತಿಹುದನು | ಅಯ್ವರಮುಂದೆ-ನೆರಿಗೆಯು ಸೆಳೆಪುದನ್ನು || ಪರಿಪರಿಬಾಧೆಯನ್ನು | ದುರುಳರ ಮೋದವನ್ನು|| ಸ್ವಪ್ನವ ||೨|| ನರಿಬಂದು ಹೂಂಕರಿಸಲು-ಭೀಮಪಾರ್ಥರು-ಮರೆಯಾಗಿ ಯೋಡುತಿರಲು || ಸರಸದಿಂದೆನ್ನ ಕರವ ಪಿಡಿದು ಸೆಳೆಯುತ್ತಿರಲು || ಸ್ವಪ್ನವ ||೩|| ಉರಿದುಬೀಳಲು ಅರಮನೆ-ನಾವೆಲ್ಲರು-ನಡುಅಡವಿಯೊಳಿಹುದನ್ನೆ || ನಡುಹಗಲೊಳು ಶೋಕ | ಪಡಿಸಿನಡೆವುದನ್ನೆ || ೪ || ಲೇಸು ಕಾಣುವುದಿಲ್ಲ-ಈ ಪತ್ರದಿಂದ-ಘಾಸಿಪಡುವೆನಲ್ಲ | ದೋಷರಹಿತನಮ್ಮ-ಶೇಷಗಿರೀಶಬಲ್ಲ ||೫||

ವಚನ|| ಈ ಪ್ರಕಾರ ದ್ರೌಪದಿ, ಸ್ವಪ್ನವನ್ನು ವಿವರಿಸಿ ಚಿಂತಾಕ್ರಾಂತೆಯಾಗಿ ಪತಿಗಳಯ್ವರನ್ನು ನೋಡಿ ಮರುಗುತ್ತಿರಲು ಭೀಮಮಾತನಾಡುವ ಬಗೆ—

ಕಂದ|| ಕಳವಳಿಪಸತಿಯ ನೋಡುತ |
ಕಲಿಭೀಮನು ನುಡಿದಬಳಲಿನೀಂಕೆಡಬೇಡಾ ||
ನಳಿನೋದರನಮಗಿರುವನು |
ನಳಿನಾಕ್ಷಿಯೆ ಭಯವಿದೇಕೆ ನಾನಿರುವಲ್ಲೀ ||೧||
ಮಾರಿಯಸರಸವನಾಡಲು |
ಕ್ರೂರನು ಕರಯಿಸಿಹನೆಮ್ಮ ವಾರಿಜಮುಖಿಯೆ ||
ಭೂರಿಯಭುಜಬಲ ತೋರುವೆ |
ಸಾರುವೆ ಮದನಾರಿನಿಂತರೂ ಬಿಡೆ ಚಪಳೇ ||೨||
ಮಾತುಗಳಪೋಗಲಾಡದೆ |
ದೂತನ ಮುಂದೆನ್ನ ಶೌರ್ಯವಾಡಲು ಗುಣವೇಂ ||
ತಾತನು ಬರೆದಿಹನೋಲೆಯ |
ನಾಥನು ಹರಿ, ನಮ್ಮೊಳಿರ್ಪನೆನಲರ್ಜುನನು ||೩||
ಬೇಸರ ಪಡುತಿದೆ ಮನವಿದು |
ಮೋಸವ ಮಾಡುವರು ಖಳರುದೋಷಕೆ ಹೆದರರ್ ||
ಘಾಸಿಯುಂ ತಪ್ಪದು ನಮಗಿದು |
ಶ್ರೀಶನಕೃಪೆಯೆಂದರಾ ನಕುಲ ಸಹದೇವರ್ ||೪||
ಅರಗಿನಮನೆಯಿಂದಾಪರಿ |
ದುರುಳರು ನಮಗಿತ್ತ ಬಾಧೆ ಮರೆಯಲು ಒಹುದೇ ||
ತರಳರಪೊರೆಯೆಂದೆನ್ನುತ |
ಕರಮುಗಿದಳು ಕುಂತಿಕೃಷ್ಣನ ಚರಣವನೆನೆದು ||೫||

ಭೀಮನ ಫಲ್ಗುಣನಕುಲನ |
ಭಾಮಿನಿ, ಸಹದೇವ, ಮಾತೆಯಾಡಿದಮಾತಂ ||
ಪ್ರೇಮದಿ ಕೇಳುತ ಧರ್ಮಜ |
ಕಾಮನ ಪಿತಕರುಣಿಸೆಂದ ಬಾಯಾರುತಲೀ ||೬||

ವಚನ ॥ ಈ ಪ್ರಕಾರ ಅಯ್ವರೂ ಸತಿ ಸಹಿತ ತಮ್ಮ ತಮ್ಮ ಯೋಚನೆಗಳಂ ಸಂತಾಪವಮಂ, ಕುಂತಿಯೊಡನುಸುರಿ ಬೊಪ್ಪ ಕರೆಯಿಸಿದರೆ ಪೋಗದಿರುವುದನುಚಿತವೆಂದು ಮನ ಮಾಡಿ ಶ್ರೀಕೃಷ್ಣನ ಚರಣಾರವಿಂದವನ್ನು ಸ್ತುತಿಮಾಡುವ ಬಗೆ—



(ಹಾಡು)

ಶರಣಗೆ ವರ ಕೊಡು ಕೊಡೊ ಮುರಾರೇ | ದುರುಳನ ಕೈ ಬಿಡ್ಸಿಬಿಡು ||ಪ|| ತಂದೆಯನ್ನು ಬಂಧನದೊಳಗಿಟ್ಟು-ಮಂದಮತಿಯು ತಾ ಕೆಟ್ಟಮುರಾರೆ || ಶರಣಗೆ ||೧|| ತಂದೆ ನೀನೆಂದು ನಂಬಿದ್ದಾ-ಕಂದನ ಬಾಧಿಸಿ ನೊಂದಮುರಾರೇ || ಶರಣಗೆ ||೨|| ಅನುಜನ ಸಭೆಯಿಂ ಪೊರಡಿಸೆ ಮೂರ್ಖನು-ದನುಜಗೆ ಮುನಿದಂದದಿ – ಮುರಾರೇ || ದುರುಳನ ಕೈ ||೩|| ಶಿಷ್ಟರನ್ನು ಪಾಲಿಪ ನಿನ್ನ ಬಿರುದೂ-ದುಷ್ಟರನ್ನು ಶಿಕ್ಷಿಪುದು ಮುರಾರೇ || ಶರಣಗೆ ||೪|| ಶೇಷಗಿರೀಶನ ದಾಸನಾನೆಂದೂ-ಪೋಷಿಸಿಂದು ನೀ ಬಂದು ಮುರಾರೇ || ಶರಣಗೆ ||೫||

ವಚನ ॥ ಈ ಪ್ರಕಾರ ಕೃಷ್ಣನ ಚರಣಾರವಿಂದವನ್ನು ನೆನೆದು ಶುಭದಿನ ಶುಭಲಗ್ನವನ್ನು ನೋಡಿ, ಸಕಲ ಸನ್ನಾಹದಿಂ ಇಂದ್ರಪ್ರಸ್ಥಪುರದಿಂದ ಹೊರಟು ಹಸ್ತಿನಾಪುರಿಗೆ ಬಂದ ಬಗೆ-

ರಾಗಾ—(ಹಾಡು)

ಪೊರಟನು ಧರ್ಮರಾಯನು–ಹರಿಸೇವಕನು ||ಪ|| ಪೊರಟನು ಧರ್ಮರಾಯನು–ನರಹರಿಸೇವಕನು | ಸ್ಮರಿಸುತ ಕೃಷ್ಣರಾಯನು ಕೈ ಬಿಡನೆಂದನು || ಪೊರಟನು ||ಅ|| ಗುಡುಗಲು ಭೂಮಿಯೊಳು–ಉಡುಗಣವುದುರಲು | ಗಿಡಮರಗಳು ಕೂಗಲು–ನೋಡುತ್ತಬರಲು || ಪೊರಟನು ||೧|| ಗಜಗಳು ಕಣ್ಣೀರ್ ಸುರಿಸೆ | ಧ್ವಜ ದಂಡಂಗಳೊಡೆಯೆ | ವಿಜನಯೂಥವು ಮುರಿಯೆ–ಕಾಣುತ್ತ ಮೈಮುರಿಯೆ || ಪೊರಟನು ||೨|| ಬುಧನೋರ್ವನೆದುರಾಗಲು | ವಿಧವೆಯಳುತ್ತಬರಲು||ಒದರುತಗೋಮಾಯನಾಯ್ಗಳು–ಖಗ ಮೃಗ ಜೀವಿಗಳು || ಪೊರಟನು ||೩|| ಹುಲಿಯನು ನರಿಯಟ್ಟುವುದಾ–ಗಿಳಿ ಗಿಡುಗನಮೇಲೆರಗುವುದಾ | ಫಲ್ಗುಣಕಾಣುತ್ತ ಬೆದರಿದ–ಮನದೊಳು ಮರುಗಿದ || ಪೊರಟನು ||೪|| ತೈಲಕಟಾಹವೊಂದು–ತರುತ ಬಿದ್ದನು ಮುಂದು | ಹೊಯ್ದಾಟವಾಯಿತೆಂದರು-ಜನರೆಲ್ಲ ನಿಂದು || ಪೊರಟನು ||೫|| ನುಡಿದನು ಭೀಮನಿಂದು–ದುಡುಕುವ ಖಳನು ಬಂದು | ಕಡೆಗಾಲವವನಿಗೆಂದನು-ಸೂಚನೆಯಿದೆಂದು ||೬|| ಶೇಷಗಿರೀಶ ನಮ್ಮ–ಪೋಷಿಸುಪರಬೊಮ್ಮ | ದಾಸರಾವಲ್ಲವೆ ನಿಮ್ಮ-ಎಂದನಾಧರ್ಮ ||೭||

ವಚನ || ಈ ಪ್ರಕಾರ ಧರ್ಮರಾಯನು ಬರುತ ಬರುತ ಮಾರ್ಗದಲ್ಲಿ ದುಶ್ಶಕುನಗಳಂ ಕಂಡು ಸರ್ವರೂ ನಾನಾ ಪ್ರಕಾರವಾಗಿ ಯೋಚಿಸುತ್ತಾ ಬರುತ್ತಿರುವಲ್ಲಿ ಕುಂತಿ ಭಗವಂತನನ್ನು ಪ್ರಾರ್ಥನೆ ಮಾಡುವ ಬಗೆ—

ಕಂದ || ಅವಶಕುನಗಳಾಗುತ್ತಿವೆ | ಅವಮಾನವು ಬಹಳ ಮಕ್ಕಳಿಗಾಗದಿಹುದೇ || ಅವಮಾನ-ಮಾನವೆಲ್ಲವು | ನವನೀತ ಚೋರನಿಗಾಯ್ತು ಎಂದಳು ಕುಂತೀ||

ವಚನ ॥ ಈ ಪ್ರಕಾರ ಯೋಚಿಸುತ್ತ ಪಯಣದ ಮೇಲೆ ಪಯಣದೊಳೈದಿ ಕರಿಪುರದ ಹೊರಬನದೊಳ್ ಧರ್ಮರಾಯನು ಬೀಡು ಬಿಡಿಸಿದ ಬಗೆ—

(ಹಾಡು)

ನರಹರಿ ಚರಣವ ಸ್ಮರಿಸುತ ಧರ್ಮಜ ಕರಿಪುರ ದಾರಿಯ ನೋಡುತಲಿ | ಕರಿರಥ ತುರುಗಪದಾತಿಗಳೊಡನಾ–ಧೊರೆಮಕ್ಕಳು ಬರುತಿಹರಲ್ಲಿ ||ಪ|| ಪಥದಲಿ ಕಾಣುವ ಅರಸುಗಳು ಬಹುಮತಿಯುಡುಗೊರೆಗಳನೀಯುತಲಿ | ಹಿತವನು ಮಾಡುತ ಕಳಹುವನಾ ಕ್ಷಿತಿಪತಿ ಪಾಂಡುಸುತನಲ್ಲಿ ||೧|| ಅಂದಳದೊಳು ದ್ರೌಪದಿ ಬರುವಳಾ ಮಂದಗಮನೆಯರ ಗುಂಪಿನಲಿ | ಸುಂದರಿ ಸರ್ವಾಭರಣವಿಟ್ಟಳು ಇಂದಿರೇಶನ ಪಾಡುತಲಿ ||೨|| ಕುಸುಮ ಮಳೆಯ ಕರೆದರು ಸುರಸತಿಯರು | ಶಶಿಮುಖಿ ದ್ರೌಪದಿ ಶಿರಿಮುಡಿಗೆ | ಶಶಿಮುಖಿ ಪಾರ್ವತಿ ಯರುಂಧತೀರತಿ–ಶ್ಯಾಮಳೆಯರ್ ಕರಮುಗಿವರಡಿಗಡಿಗೆ ||೩|| ಈ ಪರಿ ವೈಭವದಿಂದಲಿ ಬಂದರು | ಶ್ರೀಪತಿ ದಾಸರು ಹರುಷದಲಿ || ದೋಷಿಗಳಿರುತಿಹ ಪಟ್ಟಣನೋಡುತ | ತೋಷಿಲಿ ದಂಡಿಳಿಸಿದರಲ್ಲಿ ||೪|| ಚರರು ಬಂದರು ಕರ ಮುಗಿದು ಪೇಳಿದರು | ಧೊರೆ ಧೃತರಾಷ್ಟ್ರಗೆ ಭಕ್ತಿಯಲಿ || ಧುರಧೀರರು ಪಾಂಡು ಕುಮಾರರು ಬಂದಿಳಿದರು ಕರಿಪುರ ಸರಿಸದಲಿ ||೫|| ಎಂದ ನುಡಿಯ ಕೇಳುತಲಂಧನು ಹಾ ಯೆಂದು ಮೂರ್ಛೆ ಹೊಂದಿದ ನಾಗಾ || ಬಂದುಪಚರಿಸಿ ಕುರುಡಿಸಿದನು ತನ್ನಾ | ತಂದೆಯ ದುರ್ಯೋಧನ ಬೇಗಾ ||೬|| ಹುಡುಗನ ಮಾತನು ಕುರುಡನು ಕೇಳಿದ ಕಡುಮೂರ್ಖನೆಂಬುವರೆಲ್ಲಾ | ಕಡುಗಲಿ ಭೀಮನು ಬಂದಿಹ ಗದೆಯಲಿ | ಹೊಡೆದಪ್ಪಳಿಸದೆ ಬಿಡನಲ್ಲಾ ||೭|| ಶಿರಿಸೂರೆಯ ಗೊಳ್ಳುವರವರಯ್ವರು | ಕರಿಪುರ ಸಿರಿನೀಗು

ವದಲ್ಲಾ || ಅರಿಯೆನು ಮುಂದಾಗುವ ಕಥೆಯೆಲ್ಲಾ | ವರಶೇಷಗಿರಿಯ ಧೊರೆಬಲ್ಲ ||೮||

ವಚನ|| ಈ ಪ್ರಕಾರ ಧೃತರಾಷ್ಟ್ರರಾಯನು ಪಾಂಡವರು ಬಂದರೆಂಬ ವಾರ್ತೆಯನ್ನು ಕೇಳಿ, ಭೀಮ ಫಲ್ಗುಣರ ಭಯದಿಂದ ಮಗನುಳಿವು ಕಾಣೆನೆಂದು ಸತಿಪತಿಗಳು ದುಃಖಿಸಲು ಆಗ ದುರ್ಯೋಧನನು ಪಿತನನ್ನು ಸಂತೋಷಪಡಿಸಿದ ಬಗೆ—

(ದ್ವಿಪದೆ)

ಏಕೆ ನೀವ್ ದುಃಖಿಪಿರಿ-ಏಕೆ ಬೆದರುತ್ತಿಹಿರಿ|ತಂತ್ರವನು ಯೋಚಿಸಿಹೆ ಶಕುನಿ ಕರ್ಣರ ಕೂಡಿ || ದ್ರೋಣಭೀಷ್ಮವಿದುರರು ಕುಹಕಿಗಳು ನಂಬದಿರಿ | ಎಂದು ಉಪಚರಿಸುತಿರೆ ಶಕುನಿ ಬಂದನು ಮುಂದೆ || ಕರ್ಣ ಬಂದನು ಸೈಂಧವವಿಕರ್ಣರು ಬಂದರು | ಕೂಡಿದರು ಗುಂಪಾಗಿ ದುರುಳರೆಲ್ಲರು ಆಗ|ಅಂಧನೃಪಶಕುನಿಯ ಕರೆಸಿ ಸಮೀಪದಲ್ಲಿ|ಕುಳ್ಳಿರಿಸಿವಿನಯದಲಿ ಪೇಳಿದನು ಕಳಿಂಗಗೆ || ದ್ರೋಣಭೀಷ್ಮರು ಮಗನಿಗಹಿತರಾದವರಂತೆ | ನಿನ್ನನೇ ನಂಬಿರುವನೇನನೆನೆದಿಹೆನೀನು || ಎಂದು ಪೇಳಲು ಶಕುನಿ ನುಡಿದನಾಕುರುಪತಿಗೆ | ಪಗಡೆಯಾಡಿಸಿ ಮಗನ ಪಂಥದಲಿ ಗೆಲಿಸುವೆನು ಸಕಲ ಸಂಪತ್ತಿಯನು ಅಪಹರಿಸಿ ಕೊಡುವೆನಾ||ಮಾನಗೊಂಬೆನು ಅವರ ಸೆರೆಯೊಳಿರಿಸುವೆಕೇಳಿ | ದ್ರೌಪದಿಯು ತೊತ್ತಾಗುವಳು ನಿಮ್ಮ ಕೆಲಸದಲಿ || ನೆನೆದಂತೆ ಬೀಳುವುದು ಪಗಡೆಕಾಯಾವೇಳೆ|ಒಂದು ಕ್ಷಣದಲಿ ಗೆಲಿಸುವೆನು ಧೈರ್ಯದಿಂದಿರಿ ನೀವು || ಎಂದುಸಂತೈಸೆಕರ್ಣನು ನಿಂದು ನುಡಿದನಾ | ನಾನಿರಲು ಭೀಮಪಾರ್ಥರ ಭಯವುನಿನಗೇಕೆ || ಶಿರವಚಂಡಾಡುವೆನು ಕಲಹಬಂದರೆ ಕೇಳಿ ಪಾಂಡವರು ಬಂದಿರುವ ವಾರ್ತೆಯನು ಕೇಳಿದರು | ವಿದುರದ್ರೋಣಾದಿಗಳು ಮನನೊಂದು ನುಡಿದರಾ | ದುರು

ಳಿರಿಗೆ ಕಾಲತುಂಬಿತು ಎಂದನಾಭೀಷ್ಮ | ನಮ್ಮ ಬಿಡದಿರು ಎಂದು ದ್ರೋಣನುಮನಮರುಗುತಲಿ | ನೃಪಬಹುಜ್ಞಾನಿಯೆಂದನು ಕೃಪಾಚಾರ್ಯನು ಕೃಷ್ಣನಮಾಡಿದತಂತ್ರವೆಂದನಶ್ವತ್ಥಾಮ | ಅಂಧನೃಪನರ ಮನೆಗೆ ವಿದುರ ನೋಡುತ ಬಂದ | ಕಣ್ಣುಸನ್ನೆಯಲಿ ದುರುಳರೆಲ್ಲಮರೆಯಾಗಲಾ | ಏನಣ್ಣ ಪಾಂಡುಪುತ್ರರಂಕರೆಯಿಸಿದೆಯಾ || ಅರಗಿನರಮನೆಯಲ್ಲಿ ಬಲು ಕಷ್ಟಪಡಿಸಿರುವೆ | ಮರೆತೆಲ್ಲ ನಿನ್ನನೇ ಸೇವಿಸರು ಸಜ್ಜನರು || ಪುನಃ ಅವರಿಗೆ ಕೇಡು ಯೋಚಿಸಿದೆ ಮನದೊಳಗೆ | ತರವಲ್ಲ ದೈವವೂ ಲಿವ ನೇ ನಿನಗೆ ನೋಡು || ಎಂದಾಡಲಾಗ ಜಯಭೇರಿಶಬ್ದವು ಕೇಳೆ | ಧ ರ್ಮಜನು ಊರೊಳಗೆ ಬಂದನೆಂಬುವ ವಾರ್ತೆ ||ಗಡಬಡಿಸುತೆದ್ದು ಆ ಜ್ಞಾಪಿಸಿದ ಸರ್ವರಿಗೂ | ದ್ರೋಣ ಭೀಷ್ಮ ಕೃಪಾಚಾರ್ಯ ಅಶ್ವತ್ಥಾಮ| ದುರ್ಯೋಧನಾದಿಗಳು ಸಾಮಂತ ಸಚಿವರು || ಸರ್ವರೂ ಇದಿರ್ಗೊ ಳ್ಳುತಾ ಪಾಂಡು ಸುತರನ್ನು || ಕರತಂದು ಬಿಡದಿಯರ ಮನೆಯಲ್ಲಿ ನಿಲಿ ಸಲಾ | ಧರ್ಮಜನು ತಂದೆಯನು ಕಾಣಬೇಕೆಂದೆನುತ | ಅಂದಳದಿ ಬಂ ದನಾಧೃತರಾಷ್ಟ್ರನರಮನೆಗೆ | ಅಂಧನೃಪನನು ಕಂಡು ವಂದಿಸಲು ಬಿಗಿ ದಪ್ಪಿ|ಬಾ ಮಗನೆ ಮನೆಗೆಂದು ಉಪಚರಿಸಿಕೊಂಡಾಡೆ | ಗಾಂಧಾರಿಯು ನು ಕಂಡು ಪದಕೆರಗೆ ಹರಸಿದಳು || ವಿದುರನಲ್ಲಿರೆಪಾದವನು ಪಿಡಿದು ಭ ಕ್ತಿಯಲಿ | ಕಣ್ಣಿನಲಿ ಜಲವತುಂಬುತಲಿ ಆಲಿಂಗಿಸುತ | ಕೃಷ್ಣಸಂರಕ್ಷಿ ಸಲಿ ನಿಮ್ಮನೆಂದನು ವಿದುರ | ಅವರಿಂದ ಅಪ್ಪಣೆಯ ಕೊಂಡುಪೊರಡುತ ಯುವರಾಜ|ವೈಭವದಿ ಬಂದನಾ ತಾನಿರುವ ಸ್ಥಳಕಾಗಿ | ಖಳರೆಲ್ಲ ಹರುಷ ಗೊಂಡರು ತಮ್ಮ ಮನದೊಳಗೆ | ಶೇಷಗಿರಿವಾಸನಾ ಮಹಿಮೆ ಬಲ್ಲರೆ ಅವರು ||

ವಚನ|| ಈ ಪ್ರಕಾರ ಧರ್ಮರಾಯನು ಧೃತರಾಷ್ಟ್ರ ಗಾಂಧಾರಿಯರ ಅಪ್ಪಣೆಕೈಕೊಂಡು ಭೀಷ್ಮ, ದ್ರೋಣ, ವಿದು

ರಾದಿ ಸಜ್ಜನರಿಗೆ ವಂದಿಸಿ ತನ್ನ ಬಿಡಾರವನು ಸೇರಿ,ಅಂಧನೃಪ ನಾದರಿಸಿದವರ್ತಮಾನವಂ ಪೇಳಲಾ ಭೀಮನು, ನಾಳೆ ತಿಳಿಯ ಬೇಕೆಂದಾಡಲು, ಇತ್ತ ಕುರುಬಲದವರು ಸಂತೋಷಪಟ್ಟ ಬಗೆ—

ರಾಗಾ—(ಹಾಡು)

ಕರಸಿದನು ಯಮತನಯ ಬಂದನು ಅರಸಿನಪ್ಪಣೆಯಿಂದಲಿ | ತರುಣಿದ್ರೌಪದಿ ಬಂದಿರುವಳು ಪರಮಸುಖ ನಮಗಾಗಲಿ ||೧|| ನಾಳೆ ಪಗಡೆಯನಾಡುವೆವು ಅವರಾಳುತನವನು ಕಾಂಬೆವು|ಸೋಲುವನುಸರ್ವ ಸ್ವವನು ಈ ಕಾಲದಲಿ ಗೆಲುವಿಲ್ಲವು||೨||ಭೀಮಪಾರ್ಥರು ಸಿಕ್ಕಿಹರೆಲಾ ಕಾಮುಕರ ಸೆರೆಗಿಕ್ಕುವೆ | ಕಾಮಿನಿಯನಾನರಮನೆಗೆ ಸುಪ್ರೇಮದಿಂದಲಿ ಕರಸುವೆ ||೩|| ಅವಳಿಮಕ್ಕಳಿಗೆನ್ನಮನೆಯಲಿ ಕವಳಕೊಡುವೆನು ಮೋದದೀ||ಋಷಿಪತಿಯನೊಂದೆಡೆಯೊಳಿಹುದೆಂದರೆ ಇರುವನು ಸುಮ್ಮಾನದಿ || ವಿದುರನರಮನೆಯಲ್ಲಿ ಕುಂತಿಯು ಚದುರತನದಲಿ ಬಾಳಲಿ|ಮದಮುಖರು ಈ ಪರಿಯೊಳಿದ್ದರೆ ಹೆದರದಿರುವೆನು ಮನೆಯಲಿ ||೫|| ಶೇಷಗಿರೀಶನು ದ್ವಾರಕೀಯಲಿ ವಾಸಿನಾಗಿಹ ಬಲ್ಲೆಲೊ | ದೋಷಿಗಳಿಗಿನ್ನಾರು ಬೆಂಬಲ ಲೇಸು ದೊರಕುವ ದೆಮಗೆಲೋ ||೬||

ವಚನ|| ಈ ಪ್ರಕಾರ ದುರ್ಯೋಧನನು ಪೇಳಿದವನಾಗಿ ನಾಳೆಯ ದಿನ ಸಭಾಸ್ಥಾನದಲ್ಲಿ ದ್ರೋಣ ಭೀಷ್ಮಾದಿ ಸರ್ವನಾಯಕರೂ ಮಂತ್ರಿಸಾಮಾಜಿಕರೂ ಸಭಾವಿದ್ವಾಂಸರೂ ಬಂದು ನೆರೆಯಲೆಂದು ಪೇಳಿ, ತಂದೆಯಬಳಿಗೆ ಬಂದು, ಅಂಧನೃಪನನ್ನು ಒಡಂಬಡಿಸಲು ಅಂಧನೃಪನು ಧರ್ಮರಾಯನಿಗೆ ಹೇಳಿ ಕಳುಹಲು ಚಾರರು ಬಂದು ಪೇಳಿದರಾ_ ನಾಳೆಯದಿನ ಸೂರ್ಯೋದಯಕಾಲದಲ್ಲಿ ಮಗ ರಚಿಸಿರುವ

ಸಭಾಸ್ಥಾನಕ್ಕೆ ನೀವಯ್ವರೂ ಬರಬೇಕೆಂದು ಪೇಳಲಾ ಮಾತಿಗೆ ಸಮ್ಮತಿಸಿ, ಮರುದಿನ ಉದಯಕಾಲಕ್ಕೆ ಸ್ನಾನ ಸಂಧ್ಯಾವಂದನೆಗಳನ್ನಾಚರಿಸಿ, ವಿಪ್ರಸಮೂಹದಿಂ ಆಶೀರ್ವಾದವಮಂ ಪೊಂದಿ ಭೋಜನಾದಿಗಳಿಂದ ಸಂತುಷ್ಟರಾಗಿ ನಾಲ್ವರು ತಮ್ಮಂದಿರೊಡನೆ ಧರ್ಮರಾಯನು ದುರ್ಯೋಧನನ ಸಭೆಗೆ ಬರಲು, ಅದೇಪ್ರಕಾರ, ದ್ರೋಣ ಭೀಷ್ಮಾದಿ ನಾಯಕರು ದುರ್ಯೋಧನ ಮೊದಲಾದ ದುರುಳರು ಅಂಧನೃಪ, ಗಾಂಧಾರಿ, ದುಶ್ಶಳೆ, ಭಾನುಮತಿ ಇವರು ನೆರೆದಿಹರಾ ಧರ್ಮರಾಯ ಬರುವುದನ್ನು ಕಂಡು ಸರ್ವರೂ ಎದುರೆದ್ದು ಬಂದು ಧರ್ಮರಾಯನನ್ನು ಕರತಂದು ಸಿಂಹಾಸನದಲ್ಲಿ ಕುಳ್ಳಿರಿಸಲು, ದುರ್ಯೋಧನನು ಧರ್ಮರಾಯನನ್ನು ಕೂಡಿ ಮಾತನಾಡುತ್ತ ಪಗಡೆಯಾಡುವಾ-ಎಂದು ಪೇಳಲು ಆ ಮಾತಿಗೆ ಧರ್ಮರಾಯನು ಸಮ್ಮತಿಸಿ, ದುರ್ಯೋಧನನೊಡನೆ ಪಗಡೆಯಾಡುವ ಬಗೆ—

(ಹಾಡು)

ಆಟವಾಡಿದರು – ಉಭಯರಾಯ – ರಾಟವಾಡಿದರು ‖ ಪ ‖
ದುಗಭಾರ ಇತ್ತಿಗ ಎಂಬ ರಭಸದಲ್ಲಿ–ತೆಗೆದು ಕಾಯ್ಗಳನಿಡೆ ಮನೆಗಳೆಣಿಸುತಲಿ ‖೧‖ ದಶಲಕ್ಷ ಧನಗಳ ಒತ್ತೆಗಳಿಡುತಲಿ | ವಸುಮತಿ ಪತಿಗಳು ಗೆಲುವ ರಭಸದಲ್ಲಿ ‖೨‖ ಸಾರಿಗಳನು ನೋಡಿ ಶಕುನಿಪೇಳಿದಬುದ್ಧಿ | ರಾಯಪೇಳಿದಂತೆ ಕೇಳಿಂದ ದುರ್ಬುದ್ಧಿ ‖೩‖ ಕರ್ಣಸೈಂಧವ ದುಶ್ಶಾಸ ದುರುಳರೆಲ್ಲ | ಕಣ್ಣುಸನ್ನೆಗಳಿಂದ ನಗುವರು ಜನರೆಲ್ಲ ‖೪‖ ದ್ರೋಣ ಅಶ್ವತ್ಥಾಮ ಭೀಷ್ಮ ಕೃಪರುನೋಡಿ | ಗೋಣಗಳಿಗೆ ಹಬ್ಬವೆಂದರು ಮುಖಬಾಡಿ ‖೫‖ ಕುರುರಾಯನೆನೆದಂತೆ ಕೇಳುವುದಾಸಾರಿ|ವರಧರ್ಮರಾ

ಮನು ನೋಡಿದ ಬಾಯಾರಿ ||೬|| ವರಶೇಷಗಿರೀಶನು ಸಲಹದೆ ಬಿಡ ನೆಮ್ಮ | ಮರತೇಕೆ ಸುಮ್ಮನೆ ಇರುವೆ ಶ್ರೀಪರಬೊಮ್ಮ ||೭||

ವಚನ|| ಈ ಪ್ರಕಾರ ದುರ್ಯೋಧನ ಧರ್ಮರಾಯರು ಪಗಡೆಯಾಡುವಕಾಲದಲ್ಲಿ ದುಶ್ಯಾಸ, ಶಕುನಿ, ಸೈಂಧವ, ಕರ್ಣರು ನಸುನಗುತ ಕುಳಿತಿಹರಾ ಇತ್ತ ಭೀಮ, ಪಾರ್ಥ, ನಕುಲ, ಸಹದೇವರು ಮನ ಕಳವಳದಿಂದ ಕುಳಿತಿಹರಾ ಕಾಲದಲ್ಲಿ ಜಯಲಕ್ಷ್ಮಿಯು ದುರುಳರಿಗೆ ಸಂತೋಷಕೊಟ್ಟ ಬಗೆ---

(ಹಾಡು)

ದಶಲಕ್ಷಧನವನು ಗೆದ್ದನು ಕುರುಪನು-ದಶಲಕ್ಷಗೋವುಗಳಗೆದ್ದನು||ಪ||ಕರಿರಥತುರುಗಗಳಿಟ್ಟಾ ಧರ್ಮನುತಾನು | ದುರುಳನು ಬೊಕ್ಕಸವ ಗೆದ್ದನು ||೧|| ಕಂಚುಪಾತ್ರೆಗಳೆಲ್ಲ ಇಟ್ಟನು ಧರ್ಮನು | ವಂಚಿಸಿ ಖಳ ಪತಿಗೆದ್ದನು ||೨|| ಬೆಳ್ಳಿಪಾತ್ರೆಗಳನ್ನು ಒಳ್ಳೆ ವಸ್ತ್ರಗಳನ್ನ | ಹಳ್ಳಿಗ್ರಾಮಗಳನ್ನು ಸೋತನು ||೩|| ಶಕುನಿಯ ದೆಸೆಯಿಂದ ಸಕಲವಸೋತನು | ಯುಕುತಿಪೇಳೆಂದು ಧರ್ಮನೊಂದನು ||೪|| ಸಹದೇವನಕುಲರ ಗೆದ್ದನು ಕುರುಪನು | ವಸುದೇವ ಸುತನ ಸ್ಮರಿಸೆಂದನು ||೫|| ದುರ್ಜನರ ವಶವಾದ ರರ್ಜುನಭೀಮರು | ನಿರ್ಜರಪತಿ ಬೆರಗಾದನು ||೬|| ತನ್ನನ್ನೇ ತಾಸೋತು ಮುನ್ನಧರ್ಮವಸೋತು | ಕನ್ನೆ ದ್ರೌಪದಿಯನ್ನು ಸೋತನು || ರತ್ನಾಭರಣಗಳ ಇಟ್ಟನು ಧರ್ಮನು | ಮತ್ತವನಾ ಖಲ ಗೆದ್ದನು ||೮|| ಘ್ಲಾಸಿಪಡದೆ ಅಯ್ವರೊಂದೆಡೆಯಲ್ಲಿ ಕೂಡಿ | ಶೇಷಗಿರೀಶನ್ನ ಕೊಂಡಾಡಿ ||೯||

ವಚನ|| ಈ ಪ್ರಕಾರ ದುರುಳ ದುರ್ಯೋಧನನು ಪಾಂಡವರ ಸಕಲಸಂಪತ್ತನ್ನೂ ಗೆದ್ದು ಶಕುನಿಯ ತಂತ್ರದಿಂದ

## ಸಹದೇವ, ನಕುಲ, ಭೀಮ-ಪಾರ್ಥ, ಧರ್ಮರಾಯನನ್ನು ಗೆದ್ದು ಕುರುರಾಯನು ಸಭೆಗೆ ದ್ರೌಪದಿಯನ್ನು ಕರೆಯಿಸಿದ ಬಗೆ=

(ದ್ವಿಪದೆ)

ದುರುಳದುರ್ಯೋಧನನು ನುಡಿದ ಮಂತ್ರಿಯನೋಡಿ । ದ್ರೌಪದಿಯ ಕರೆದುತಾರೆನಲು ಕೈಮುಗಿಯುತಲಿ ॥ ಪೊರಟುಬಂದನುದ್ರುಪದ ಸುತೆಯಿರುವ ಅರಮನೆಗೆ|ಒಳಪೊಕ್ಕುತಾಕಂಡು ವಂದಿಸುತ ಕೈಮುಗಿದು|| ಕೇಳಮ್ಮ ಕರಿಪುರದ ಧೊರೆಯು ದುರ್ಯೋಧನನು | ಕಳುಹಿರುವನೆನ್ನ ನಿಮ್ಮ ಕರತಹುದೆಂದೆನುತ । ಬರಬೇಕು ಕ್ಷಿಪ್ರದಲಿ ರಾಯ ಕೋಪಿಸುತಿಹನು । ಪಗಡೆಯಾಡುತ ನಿಮ್ಮ ರಮಣರಯ್ವರುಕೇಳೆ । ಸೋತುಕುಳಿತಿಹರು ಬೆರಗಾಗಿ ಮಹರಾಯರೂ । ಎಂದುಪೇಳಲು ಕಣ್ಣಿನಲಿ ಜಲವ ತುಂಬಿದಳು । ನಿಟ್ಟುಸಿರುಬಿಡುತ ಮಾತಾಡಿದಳು ವಿನಯದಲಿ ॥ ಪೇಳಯ್ಯ ಮಂತ್ರೀಶಿರೋಮಣಿಯೆ ನೀಪೇಳು । ಕ್ರಮದಿಂದ ವಿವರಿಸು ಪಗಡೆಕಾಯ ಸೋತಿಹುದ|ಎಂದು ಕೇಳಲು ವಿನಯದಿಂದ ನುಡಿದನು ಮಂತ್ರಿ। ಧರ್ಮಜನು ಕುರುಪತಿಯು ಪಗಡೆಯಾಡಿದರಮ್ಮ । ಪಂಥದಲಿ ಒತ್ತೆಗಳನಿಡುತಭೂಪತಿಗಳಾ । ಶಕುನಿಕೃತ್ರಿಮದಿಂದ ಧರ್ಮಸೋಲುತಬಂದ ॥ ಮುಂದಾಗಿ ಧನಗಳೆಲ್ಲವ ಸೋತಧರ್ಮಜನು|ಆಮೇಲೆ ಧಾನ್ಯರಾಸಿಗಳ ವಸ್ತ್ರಗಳನ್ನು।ಕರಿರಥವತುರುಗಗಳ ಗೋಮಹಿಷ ಶಸ್ತ್ರಗಳ । ಪುರಗ್ರಾಮ ಹಳ್ಳಿಗಳ ಬೊಕ್ಕಸಸಹ ರಾಜ್ಯವ|ಸರ್ವವನುಸೋತು ಕೋಪದಲಿ ಪಂಥವನು ಬಿಡದೆ।ಪುನಃ ಆಡಿದನು ತಮ್ಮಂದಿರನು ಒಡ್ಡುತಲಿ । ಮೊದಲು ಸಹದೇವನಾಮೇಲೆ ನಕುಲನಸೋತು । ತರುವಾಯ ಭೀಮಪಾರ್ಥರ ಸೋತು ಯೋಚಿಸುತ।ತನ್ನದೇಹವತಾನೆ ಒಡ್ಡಿಸೋತನು ರಾಯ।ಆಮೇಲೆ ನಿಮ್ಮಹೂಡಿದನು ಕೇಳಮ್ಮಯ್ಯ || ನಿಮ್ಮನೂ ಸೋತು ಮನನೊಂದುನಿಂತಿತು ಆಟ । ದುರ್ಜನರ ಸ್ವಾಧೀನವಾಗಿ ಕುಳಿತಿಹರಲ್ಲಿ|ಸಭೆಯಲ್ಲಿ ಮರು

ಗುವರು ಅಯ್ವರನುನೋಡುತಲಿ | ಕರ್ಣಶಕುನಿಗಳಕಪಟತಂತ್ರವಿದಮ್ಮ ಯ್ಯ । ಈ ವಾರ್ತೆ ನಿಜವು ವಿಜ್ಞಾಪನೆಯಮಾಡಿದೆನು ॥ ಎಂದ ಮಾತನುಕೇಳಿ ಸಹಿಸುತ್ತ ಪೇಳಿದಳು-ಎನ್ನ ಕರೆಸುವೊಡೆಕುರುಪತಿಗೆಲ್ಲಿ ಸ್ವಾತಂತ್ರ್ಯ । ತನ್ನ ತಾಸೋತಿರುವ ದೈವಗತಿಯಲಿಧರ್ಮ । ಪರರಆಧೀನವಾದನುಮಹಾರಾಯನಾ । ಕುರುಪತಿಯ ವಶರಾದರೈಸತ್ಯದೊಳಗವರು । ಆ ಮೇಲೆ ಯನ್ನ ಸೋಲುವೊಡೆಕಾರಣವಿಲ್ಲ।ಮೂರೊಂದು ಅನುಜರನು ಸೋತಂತೆ ಧರ್ಮಸುತ । ಎನ್ನ ಸೋತಾಮೇಲೆ ಬರುವೆನಾಂಕೇಳಯ್ಯ ತಾಸೋತಮೇಲೆ ಆಡಿದ ಆಟ ಸಲ್ಲದೆಲೊ।ದುರುಳನಿಗೆ ಮತಿಯಿಲ್ಲ ಬರುವಳಲ್ಲವು ನಾನು|ಬಹುಜನರುಕೂಡಿಹರು ರಚಿಸಿರುವ ಸಭೆಯಲ್ಲಿ । ದ್ರೋಣಭೀಷ್ಮಾದಿಗಳು ನೆರೆದಿಹರು ಸಜ್ಜನರು । ಧೃತರಾಷ್ಟ್ರವಿದುರರೂ ಕುಳಿತಿಹರು ಮಂಟಪದಿ । ಗಾಂಧಾರಿ ದುಶ್ಶಳೆಯು ಭಾನುಮತಿಯಿಹರಲ್ಲಿ । ಸರ್ವರಿಗು ಕೈಮುಗಿದು ಪೇಳು ಈ ನುಡಿಗಳನು । ಸಜ್ಜನರು ಸಮ್ಮತಿಸಿ ಬರಲಿಯೆಂದರೆ ಬರುವೆ । ಕುರುಪತಿಯ ಮಾತಿಗೇ ಬರುವಳಲ್ಲವು ನಾನು। ಎಂದು ಪೇಳಿ ಕಳುಹಲು ಬಂದನಾ ಮಂತ್ರಿವರ । ದ್ರೌಪದಿಯು ಬರುವಳೆನ್ನುತ ನೋಡುತಿರೆ ಖಳನು । ಮಂತ್ರಿಯೋರ್ವನೆ ಬಂದನೆಂದು ಕೋಪದೊಳಿರಲು । ಅನಿತರೊಳು ಮಂತ್ರಿ ಬಂದೆರಗಿ ಕೈ ಮುಗಿಯುತಲಿ । ಕೇಳಯ್ಯ ಮಹರಾಯ ಅಲ್ಲಿ ನಡೆದಿಹ ವಾರ್ತೆ । ಆಜ್ಞಾಪ್ರಕಾರ ನಾನಿಲ್ಲಿಂದ ಪೊರಡುತಲಿ । ಪಾಂಡವರ ಅರಸಿಯಿಹ ಮಂದಿರವನಾ ಹೊಕ್ಕು-ಕಂಡು ಪಾಂಚಾಲಿಯನು ಭಕ್ತಿಯಿಂ ಕಯ್ಮುಗಿದು । ಕುರುರಾಯ ಕಳ್ಹಿರುವ ನಿಮ್ಮ ಬಳಿಗೆನ್ನನು । ಕ್ಷಿಪ್ರದಲಿ ಕರೆದು ತಾರೆಂದು ನೇಮಿಸಿರುವನು । ಎಂದು ಪೇಳಲು ನುಡಿದಳಾ ದ್ರೌಪದಿಯು ಎನಗೆ । ಸಭೆಯೊಳಗದೇನೇನು ನಡೆದುದೋ ಪೇಳೆನಲು । ಧರ್ಮಸುತ ಸೋತ ಬಗೆಯನು ವಿಸ್ತರಿಸಿ ಪೇಳೆ । ಎನ್ನ ಕರೆಯಿಸಲು ಕುರುಪತಿಗೇನು ಸ್ವಾತಂತ್ರ್ಯ ।

ನಾಲ್ವರನುಜರ ಸೋತತೆರದಿ ಸೋತರೆಯೆನ್ನ । ಕುರುಪ ಕರೆಯಿಸಬಹುದು ಅಯ್ವರೊಡನಾಗಿರುವೆ । ಅರಸು ಪರರ ಅಧೀನನಾದ ತರುವಾಯದಲಿ । ಎನ್ನ ಪೊತ್ತೆಯನಿಟ್ಟು ಆಡೆಕಾರಣವೇನು । ಸಜ್ಜನರು ಬಹುವಾಗಿ ನೆರೆದಿಹರು ಸಭೆಯಲ್ಲಿ । ಅವರಿಗೀಮಾತ ತಿಳುಹೆಲೊ ಧೈರ್ಯದಲಿ ನೀನು । ಅವರು ಮನವೊಪ್ಪಿ ಬರಬೇಕೆಂದರಾಕ್ಷಣಕೆ । ಸಿದ್ಧದಿಂ ಬರುತಿಹೆನು ಎಂದು ಕಳುಹಿದಳಬಲೆ । ಎನ್ನಲಾ ನುಡಿಗೇಳಿ ದ್ರೋಣ ಭೀಷ್ಮಾದಿಗಳು। ನಾಸಿಕದ ಮೇಲೆ ಬೆರಳಿಟ್ಟು ತಲೆದೂಗಿದರು । ಸಜ್ಜನರು ಸಲ್ಲದೀ ಕಾರ್ಯದುರುಳನೆ ಕೇಳು।ಬೇಡಣ್ಣ ದ್ರೌಪದಿಯ ಗೊಡವೆಯೆಂದವಿಕರ್ಣ। ಬಹುತೆರದಿ ಬುದ್ಧಿಪೇಳಿದನಂಧನೃಪಸುತಗೆ। ಕೆಡಬೇಡಿ ಮಕ್ಕಳಿರ ಎಂದು ನುಡಿದನು ವಿದುರ । ಬಹುಕಾರ್ಯವಾಗುವುದು ಎಂದನಶ್ವತ್ಥಾಮ । ಗಡಿಗೆ ಗುರಿಯಾದ ಕುರುಪತಿಯೆಂದನಾದ್ರೋಣ । ಯಾರಮಾತನು ಕೇಳದಾಗ ದುರ್ಯೋಧನನು । ತಮ್ಮ ದುಶ್ಶಾಸನನ।ನೋಡಿ ನುಡಿದನು ಖಳನು । ಪೋಗಿಯವಳ ಸೆಳೆತಾರೆನಲು ಧಿಮ್ಮನೆ ಎದ್ದು । ನಡೆತಂದ ನಡಿಗಡಿಗೆ ಹರುಷಪಡುತಲಿ ದುರುಳ । ಬಂದು ಹೊಕ್ಕನು ದ್ರುಪದ ಸುತೆಯ ಮಂದಿರವನ್ನು । ನೋಡುತಲೆ ಮುಂದಲೆಯ ಪಿಡಿದೆಳೆದನಾ ಖೂಳ । ಶೇಷಗಿರಿವಾಸನಾದಾಸನರಸಿ ನಡುಗಲು ॥

ವಚನ ॥ ಈ ಪ್ರಕಾರ ದುರುಳ ದುಶ್ಶಾಸನನು ದ್ರೌಪದಿಯ ಮುಡಿಪಿಡಿದು ಬಾ ಸಭೆಗೆಂದು ಸೆಳೆಯಲು ದ್ರುಪದಾತ್ಮಜೆ ಖಳನೊಡನೆ ಮಾತನಾಡುವ ಬಗೆ—

(ಹಾಡು)

ಬಿಡೊ ಬಿಡೊ-ಕಡೆಗಾಲ ನಿನಗೇ ಇದು-ಮಡದಿಯ ಮುಡಿ ಪಿಡಿದೆಳೆವುದೆಲಾ ॥ಪ॥ ನುಡಿವೆ ಭೀಮನು ತಲೆ-ಕಡಿಯದೆ ಬಿಡನೋಡಾ ।

ದುಡುಕಬೇಡ ಕೆಡುವೆಯೊ ಮೂಢಾ ||೧|| ಕಡೆಗಿರುವಳ ಖಳ-ಬಿಡು ಎಂದರೆ ಕೇಳಾ | ಹಿಡಿದು ಕುರುಳನು ಪಿಡಿವನು ಖೂಳಾ ||೨|| ಒಡೆಯ ಶೇಷಗಿರೀಶ-ಸುಡುವ ನಿನ್ನಯ ಕುಲ | ದುಡುಕು ತನವು ಬೇಡ ಬೇಡ ವೆಲಾ ||೩||

ವಚನ || ಈ ಪ್ರಕಾರ ದುರುಳ ದುಶ್ಯಾಸನನು ಪಾಪಕ್ಕಂಜದೆ ದ್ರೌಪದಿಯ ಮುಡಿಪಿಡಿದೆಳೆಯಲು ಸತಿ, ಗಾಭರಿಯಾಗಿ ಕೂಗಿಕೊಳ್ಳಲು, ಕೂಡಿದರು ದಶ ಸಹಸ್ರದಾಸಿಯರು, ಕಾವಲು ಜನರು ಬೇಡಬೇಡವೆನಲು ಮುಂದಾದ ಕಥೆಯನ್ನು ಜನಮೇಜಯ ರಾಯನಿಗೆ ವೈಶಂಪಾಯನರು ಹೇಳುವ ಬಗೆ—

(ಲಾವಣಿ)

ಹಿಡಿದೆಳೆದನು ಮುಡಿಪಿಡಿದು ದುರುಳ ಖಳ-ಜಡಿದಪ್ಪಳಿಸುತ ರೋಷದಲಿ | ತಡೆದ ದಾಸಿಯರಾ ಹೊಡೆದಪ್ಪಳಿಸುತ ಅಡಿಯಿಡೆ ಮುಂದಕೆ ಬೇಗದಲಿ ||೧|| ಬಾರಿಬಾರಿಗು ಬಂದಡ್ಡವಿಸುವರು ನಾರೀಮಣಿಯರತಿ ಶೋಕದಲಿ | ಚೀರುವರನು ಕೆಡಹುತ ನಡೆತಂದನು ಸಭೆನೋಡಲು ಬಹು ಕ್ಲೇಶದಲಿ ||೨|| ಬಿಡದೆ ಬರುವರಾ ದಶಸಹಸ್ರ ದಾಸಿಯರು ಸುತ್ತಲೂ ರೋದನದಿ | ಬಡಿದನು ಬಿಡದೆ ಮುಸುಕುವರಾ ಖಡ್ಗದೊಳಿರಿದನು ನಿರ್ಭಯದೀ ||೩|| ಮಂದಗಮನೆ ದ್ರೌಪದಿಯಂ ಸಭೆಯಲಿ ತಂದು ನಿಲಿಸಿದನೇನೆಂಬೆ | ಇಂದುವದನೆಯನು ಕಾಣುತ ನೆರೆದಾಮಂದಿ ಕಣ್ಣುಗಳಲಿ ಜಲತುಂಬೇ ||೪|| ಬಾ ದ್ರುಪದಾತ್ಮಜೆ ತೊಡೆಮೇಲ್ಕುಳ್ಳಿರು ಬಾ ಸಂಪತ್ತನುಭವಿಸುವೊಡೇ || ಬಾ ತಡವೇತಕೆಯೆನೆ ದುರ್ಯೋಧನ ಭಾಮಿನಿ ಭುಗಿಲೆನ್ನುತಲಾಡೇ ||೫|| ಕಡುಗಲಿ ಭೀಮನು ಯುದ್ಧದಿ ನಿನ್ನನು ತೊಡೆಗಳೆರಡ ಕಡಿಯಲು ಆಗಾ | ಎಡಗಾಲಲಿ ಒದೆಯಲು ರಣರಂಗದಿ ಕಡು ಚಪಳೆಯು ಬರುವಳು ಬೇಗಾ ||೬|| ನರಿನಾಯಿ ಪಾಲಶಾಗುವಿರೆಲ್ಲ

ರು ನೀವ್ ತರವಲ್ಲವೊ ಕೆಡಬೇಡೀಗ | ಹಿರಿಯರು ನ್ಯಾಯವ ಪೇಳಲಿ ಮೆಚ್ಚಿಸು ಅವರು ನುಡಿಯಲೆನ್ನ ಮುಂದೀಗ ||೭|| ಕೇಳುತಲಾಖಳ ದು ರ್ಯೋಧನ ಬಲುಕೋಪದಿ ದುಶ್ಶಾಸನಗೆಂದಾ | ಬಾಲೆಯ ಸೀರೆಯ ಸುಲಿದು ನಿಲ್ಲಿಸೆನ್ನಲಾ ನುಡಿಕೇಳುತ ಜನವೃಂದಾ ||೮|| ಮಡದಿಯ ಸೆರಗನು ತೆಗೆದನು ಸೀರೆಯ ನೆರಿಗೆಯ ತೆಗೆದನು ಮೋದದಲೀ|ಎಡಗಯ್ಯಲಿ ಉಡಿಯ ಪಿಡಿದಳು ಬಲಗಯ್ಯಲಿ ಸ್ತನಗಳನಪ್ಪುತಲೀ ||೯|| ತರಳೆಯ ಮಾನವ ಕಳೆವನು ದುರುಳನು ಪರಿಪಾಲಿಸಿ ನೀವೆಂದೆನುತಾ | ಮೊರೆಯಿಟ್ಟಳು ಸಭೆಯಲಿ ಕುಳಿತಿರುವಾ ಸುಜನರೆಲ್ಲರಿಗೆ ಬಾಯ್ಬಿಡುತಾ ||೧೦|| ಪತಿಗಳಯ್ವರು ತಲೆಬಾಗಿ ಕುಳಿತಿಹರಾ-ಹಿತವರಾರಕಾಣೆನಗಿಲ್ಲೀ | ರತಿಪತಿ ಪಿತ ಶೇಷಗಿರೀಶನೆ ನಿನ್ನ ಕೃಪೆ ಸಲಹಬೇಕೆನ್ನಿಲ್ಲೀ ||೧೧||

ವಚನ || ಈ ಪ್ರಕಾರ ದುರುಳ ದುಶ್ಶಾಸನನು ಸಭೆಯಲ್ಲಿ ಯಾರನ್ನೂ ಲೆಕ್ಕಿಸದೆ ಪತಿಗಳಯ್ವರ ಮುಂದೆ ದ್ರೌಪದಿಯನ್ನು ನೆರಿಗೆ ಪಿಡಿದೆಳೆಯಲು ಆಗ ಪಾಂಚಾಲಸುತೆ ಸಭೆಯನ್ನೂ ಅಂಧನೃಪನನ್ನೂ ಕುರಿತು ಹೇಳುವ ಬಗೆ—

(ಆರ್ಯಾ)

ಅಂಧನೃಪನೆ ಬಲು ನೊಂದೆನು ನಿನ್ನಯ-ಕಂದನ ಕರೆಯ್ಯೆ ಬೇಗದಲೀ|ಬೆಂದಿರುವದು ಸಿರಿಯೆಲ್ಲವ ನೋಡುತ|ನಿಂದಿಹರೆಲ್ಲರು ಮೋದದಲೀ||೧|| ಅತ್ತೆಯವರೆ ಹೆಣ್ಮಕ್ಕಳುಗಳ ನೀವ್ ಪೆತ್ತವರಲ್ಲವೆ ಮೋಹದಲೀ | ಮೃತ್ಯುವಿಗಾಹುತಿಯಿತ್ತಿರಿ ನಿಮ್ಮಯ ಪುತ್ರರನೆಲ್ಲರ ಭಕ್ತಿಯಲೀ || ೨ || ದ್ರೋಣರು ಭೀಷ್ಮ ಕೃಪಾಶ್ವತ್ಥಾಮರು-ಮಾನನಿಧಿಗಳೆಲ್ಲರು ಇರಲೂ | ಮಾನಿನಿಯೋರ್ವಳಿಗೀ ವಿಧಿಯೇ ನೀವ್-ಧ್ಯಾನಿಸಿ ಸುಜನರು ಧರ್ಮದೊಳೂ ||೩|| ಭಾನುಮತಿಯೆ ದುಶ್ಶಳೆಯರೆ ನಿಮಗವ-ಮಾನವಿದಲ್ಲವೆ

ಸಭೆಯೊಳಗೇ | ಭಾನುಶಶಿವಂಶದ ನೃಪರರಸಿಯರಿಗಿಲ್ಲರಿಗಿದು ಮುಂದಿನ ಬೇಗೇ ||೪|| ಪತಿಗಳ ನೋಡಿದಳಾ ದ್ರೌಪದಿತಾ-ವತಿಶೋಕದಿ ತಲೆವಾಗಿರಲು | ಹಿತವನು ಮಾಳ್ಪರ ಕಾಣೆನು ಎನುತಾ ರತಿಪತಿ ಜನಕನ ಸ್ಮರಿಸಿದಳೂ ||೫|| ಹಾಕೃಷ್ಣಾ ಹಾದ್ವಾರಕೆಯರಸನೆ | ಹಾಹಾ ಭಕ್ತಾನಾಶ್ರಯನೇ | ಹಾ ಕಂಸವೈರಿಯೇ ಬಲನನುಜನೇ |ಬಂದು ಸಲಹೆಲೋ ಸಿರಿವರನೇ ||೬|| ದೋಷಿಯು ಸೆಳೆಯುವ ಸೀರೆಯ ನೆರಿಗೆಯ ಮಾನವಗೊಂಬಭಿಲಾಷೆಯಲೀ | ದೋಷರಹಿತನೇ ಶೇಷಗಿರೀಶನೆ ನೀನೊಲಿದವರಿಗೆ ಭಯವೆಲ್ಲಿ ||೭||

ವಚನ||ಈ ಪ್ರಕಾರ ದ್ರೌಪದಿ, ಸಭೆಯನ್ನುನೋಡಿ ಮೊರೆಯಿಡಲು, ದ್ರೋಣ ಭೀಷ್ಮಾದಿಗಳು ತಲೆವಾಗಿ ಸುಮ್ಮನಿರಲು, ಅಂಧನೃಪ ಮೌನದಿಂದಿರಲು, ಗಾಂಧಾರಿ, ಭಾನುಮತಿ,ದುಶ್ಶಳೆಯರು ಮನದೊಳು ಸುಮ್ಮಾನದಿಂದಿರಲು, ಕರ್ಣ ಶಕುನಿಗಳು ಹಾಸ್ಯಮಾಡುತ್ತಿರಲು, ಪತಿಗಳು ತಲೆವಾಗಿರಲು ಆಕಾಲದಲ್ಲಿ ದ್ವಾರಕಾವಾಸನಾದ ಶ್ರೀ ಕೃಷ್ಣನನ್ನು ನೆನೆದ ಬಗೆ—

(ಹಾಡು)

ಪಾಹಿಮಾಂ ಪಾಹಿಮಾಂ ಕೃಷ್ಣಾ ಕೃಷ್ಣಾ | ಖಗವಾಹನ ಕಂಸ ಸಂಹಾರಿ ಕೃಷ್ಣಾ ಕೃಷ್ಣಾ ||ಪ|| ದುರುಳನು ಸಭೆಯಲಿ ಸುಲಿವನು ಸೀರೆಯ ಕೃಷ್ಣಾ ಕೃಷ್ಣಾ | ತರಳೆಯನಾದರಿಸುವವರನು ಕಾಣೆನು ಕೃಷ್ಣಾ ಕೃಷ್ಣಾ || ಪಾಹಿಮಾಂ ||೧|| ಕಡುಗಲಿ ಭೀಮನು ಮೌನವ ಧರಿಸಿದ ಕೃಷ್ಣಾ ಕೃಷ್ಣಾ | ಕಡುಮೂರ್ಖನು ಕುರುಪತಿಯೆಂದರಿತಿಹೆ ಕೃಷ್ಣಾ ಕೃಷ್ಣಾ || ಪಾಹಿಮಾಂ ||೨|| ಪಗಡೆಯಲಿ ಪಾಂಡವರು ಸೋತರೈ ಕೃಷ್ಣಾ ಕೃಷ್ಣಾ | ಹಗೆಗಳ ಕೈವಶವಾಗಿಹೆ ಬಿಡಿಸೈ ಕೃಷ್ಣಾ ಕೃಷ್ಣಾ ||

ಪಾಹಿಮಾಂ ||೩|| ಕಿರುಬೆರಳುಗುರಲಿಗಿರಿಯನು ಧರಿಸಿದೆ ಕೃಷ್ಣಾ ಕೃಷ್ಣಾ | ಕರುತುರುಗಳ ಗೋಪಾಲರಸಲಹಿದೆ ಕೃಷ್ಣಾ ಕೃಷ್ಣಾ || ಪಾಹಿಮಾಂ ||೪|| ನರಹರಿರೂಪದಿ ತರಳನಿಗೊಲಿದೆಯೊ ಕೃಷ್ಣಾ ಕೃಷ್ಣಾ | ಕರಿವರದನು ಎಂದರಿತಿಹೆ ನಿನ್ನನು ಕೃಷ್ಣಾ ಕೃಷ್ಣಾ || ಪಾಹಿಮಾಂ || ಸುರನರ ಬ್ರಹ್ಮಾದಿಗಳಿಗೊಡೆಯನೆ ಕೃಷ್ಣಾ ಕೃಷ್ಣಾ | ತರಳೆಯ ಮೊರೆಯನು ಲಾಲಿಸು ಮರೆಯದೆ ಕೃಷ್ಣಾ ಕೃಷ್ಣಾ || ಪಾಹಿಮಾಂ ||೬|| ತಡೆಯಲಾರೆ; ಖಳ ಕೈದುಡುಕು ಮಾಡುವ ಕೃಷ್ಣಾ ಕೃಷ್ಣಾ|ಒಡೆಯರಯ್ವರು ತಲೆವಾಗಿಹರೆಲೋ ಕೃಷ್ಣಾ ಕೃಷ್ಣಾ || ಪಾಹಿಮಾಂ||೭||ಅನ್ಯರ ಕಾಣೆನು ಎನ್ನರಕ್ಷಿಪರಾ ಕೃಷ್ಣಾ ಕೃಷ್ಣಾ | ಪನ್ನಗಶಯನನೆ ನಿನ್ನ ನಂಬಿದೆನೊ ಕೃಷ್ಣಾ ಕೃಷ್ಣಾ || ಪಾಹಿಮಾಂ ||೮|| ದೋಷರಹಿತ ನಮ್ಮ ಶೇಷಗಿರೀಶನೆ ಕೃಷ್ಣಾ ಕೃಷ್ಣಾ | ಘಾಸಿಯ ಹರಿಸಿ ಸಂತೋಷಪಡಿಸೈ ಕೃಷ್ಣಾ ಕೃಷ್ಣಾ || ಪಾಹಿಮಾಂ ||೯||

(ಕಂದ)

ಈಪರಿಮೊರೆಯನುಕೇಳುತ | ಶ್ರೀಪತಿ ಮನನೊಂದು ತನ್ನ ಮನದೊಳು ಬಗೆದಾ || ಪಾಪಿಗಳಿಗಂತ್ಯಕಾಲ ಸ| ಮೀಪಿಸಿತೆಂದಿಂತು ಕೋಪಗೊಂಡಮುಕುಂದಾ ||೧|| ನವರಂಗಮಂಟಪದೊಳಾ | ನವರತ್ನವುಕೆತ್ತಿರುತಿಹಸಾರಿಯಪಿಡಿದಾ || ನವಮೋಹನಾಂಗಿಯರೆನಾ | ನವಲೀಲೆಗಳನ್ನು ತೋರುವೆಬನ್ನಿರೆಂದಾ ||೨|| ಎಂದಾಡಿದುದಂಕೇಳುತ | ಬಂದಳುರುಕ್ಮಿಣಿಯುಸತ್ಯಭಾಮಾಸಹಿತಾ || ಕಂದರ್ಪಜನಕನಗುತಲಿ | ಸುಂದರಿಯರೆನಿಮ್ಮ ಚತುರತೆಯನೋಳ್ಪೆನೆನಲ್||೩|| ದುಗಭಾರವಿತ್ತಿಗವೆನುತ|ಮಿಗೆಹರುಷದೊಳಾಟವಾಡುತ್ತಿರಲಾಕೃಷ್ಣಂ | ಮೃಗಲೋಚನೆಪಾಂಚಾಲಿಯ | ಬಗೆಯಂಚಿಂತಿಸಿ ಕರುಣಿಸಿ ಸಲಹಿದನಾಗಳ್ ||೪||

ವಚನ॥ ಈಪ್ರಕಾರ ಸಭೆಯಲ್ಲಿ ದುರುಳದುಶ್ಯಾಸನನು ದ್ರೌಪದಿಯ ಸೀರೆಯನ್ನು ಸುಲಿಯುತ್ತಿರಲು ದ್ರೌಪದೀದೇವಿಯು ಶ್ರೀಕೃಷ್ಣನಂಕುರಿತು ಮೊರೆಯಿಡಲು ಪತಿಗಳು ನೋಡಿತಲೆವಾಗಿರಲು ಸರ್ವರು ಸುಮ್ಮನಿರಲು ಕರುಣಾಕರನಾದ ಶ್ರೀಹರಿಯು ಪಾಂಚಾಲಸುತೆಯ ಮಾನವಂ ಸಂರಕ್ಷಿಸಿದ ಕಥೆಯನ್ನು ವೈಶಂಪಾಯನರು ಜನಮೇಜಯರಾಯಗೆ ಪೇಳುವಬಗೆ—

(ಹಾಡು)

ಆಹಾ ಭಕ್ತವತ್ಸಲನೆಂಬ ಬಿರುದಂ ಹರಿತೋರಿದನಾಸಭೆಗೆ ||ಪ|| ದ್ವಾರಕೀಯೊಳುಸಿರಿರಮಣನು ತನ್ನಯಪ್ರಾಣಕಾಂತೆಯರೊಡನೇ । ಸಾರಿಗದ್ದುಗೆಯೊ ಪಗಡೆಯನಾಡುತ ನೆನೆದನು ದ್ರೌಪದಿಯನ್ನೆ ||೧|| ದುರುಳನು ಸಭೆಯಲಿ ಸುಲಿವನು ಸೀರೆಯ ನೆಂದು ಮನದಿ ತಿಳಿದಾ | ಸರಸದಿ ಸಾರಿಯ ನಿಡುತಲಿ ಅಕ್ಷಯವಾಗಲೆಂದು ನುಡಿದ ||೨|| ಮುಸಿಮುಸಿನಗುತಲಿ ಸತ್ಯಭಾಮಾದೇವಿಕೈಮುಗಿಯುತಲೀ | ಪುಸಿಯಾಡದೆ ಯಿವಾತೇಯೆಲ್ಲರಿಗೆ ತಿಳಿಯಿಸೆಲೋವಿವರದಲೀ ||೩|| ದ್ರುಪದಸುತೆಯ ವಸ್ತ್ರಾಕರ್ಷಣದಲಿನಿಪುಣತನವಿದೆಂದೂ । ಕೃಪಣನಾಕುರುಪತಿಯವನನುಜನುಮಾಡುವನೆಂದು ||೪|| ಚಪಲೆನೋಡುತೆ ಹಾ ಕೃಷ್ಣಾ ಹಾ ಕೃಷ್ಣಾಯೆಂದು । ಅಪರಿಮಿತತಾಪದಿ ಕೂಗಲು ಎನ್ನಕೃಪೆಯಾಯಿತುಇಂದು ||೫|| ಎಂದುನುಡಿಯೆ ರುಕ್ಮಿಣಿಮನೋಹರ್ಷಗೊಂಡುನುಡಿದಳೆಂದು|ತಂದೆತಾಯಿಬಂಧುಗುರು ಪಾಂಡವರಿಗೆಂದಳುನಗುತಂದೂ ||೬|| ಶೇಷಗಿರೀಶನ ಒಲಿದರೆ ಕಡಮೆಯೆ ಬೆಳೆದುದಲ್ಲಿಸೀರೇ | ದೋಷಿ ವಸ್ತ್ರಗಳಸೆಳೆದು ಬಳಲಿನಿಂತನು ಕೆಟ್ಟಿತುಮೋರೇ ।। ಆಹಾ ಭಕ್ತವತ್ಸಲ ||೭||

ವಚನ॥ ಈ ಪ್ರಕಾರ ಶ್ರೀಕೃಷ್ಣಪ್ರಸಾದದಿಂದ ದ್ರೌಪದಿಯು ಉಟ್ಟಸೀರೆ ಬೆಳದ ಬಗೆ—

ರಾಗ— (ಕಡುಕು) ||ಶೀರೂಪದಮಟ್ಟು||

ನಡುಗಿತುಸಭೆಯೆಲ್ಲ-ಬಳಲಿದನಾಖುಲ್ಲಾ ||ಪ|| ಕಣ್ಣಿವೆಗಳಮು ಚ್ಚುತವೊಯ್ಯಾರ್ | ಕರಗಳಜೋಡಿಸಿನಿಂದಳುನೀರೆ | ತನುಮನಧನಹರಿಗೆ ರೆದಳುಧಾರೆ | ಸುಲಭದಿಸೆಳೆದನು ಉಟ್ಟಿಹಸೀರೆ | ಸರ್‍ರನೆಬಂದಿತುಕ ಯ್ಗೊಸೀರೆ | ತಿರುಗಿನೋಡೆ ಉಟ್ಟಿಹಳಾಸೀರೆ | ಖಳಬೆರಗಾಗುತ ಸೆಳದ ನುಸೀರೆ | ಬೆಳಯುತಿದುರ್ದಾಪರಿಪರಿಸೀರೆ || ನಾನಾಬಣ್ಣದಿ ಮಿನುಗುವ ಸೀರೆ | ಜಂಗಾವಿಯ ಕೆಳಗಾವಿಯಸೀರೆ | ಕತಾರಿಲಿಂಚು ಕಲಾಬತ್ತು ಸೀರೆ | ಭರಜರಿಕುಸುಂಬ ಬಣ್ಣದಸೀರೆ | ಹೊಂಬಣ್ಣದ ಬುಗುಡಂಚಿನ ಸೀರೆ | ಹಳದಿಯಬಣ್ಣದ ಚುಕ್ಕಿಯಸೀರೆ | ನವಿಲುಬಣ್ಣಗಿಳಿಬಣ್ಣದ ಸೀರೆ | ಮೇಘವರ್ಣ ದೊಡ್ಡಂಚಿನಸೀರೆ | ಚಿತ್ರವಿಚಿತ್ರವ ಬರದಿಹಸೀರೆ | ಹೆಚ್ಚುವೌಲ್ಯ ತಗುಲಿದ ಬಹುಸೀರೆ | ಪಂಚವರ್ಣ ಪಗಡ್ಡುವ್ವಿನಸೀರೆ | ಮುತ್ತುಪೋಣಿಸಿದಾ ಸೆರಗಿನಸೀರೆ | ಬಂಗಾರದಹುವ್ವಿನ ಬಹುಸೀರೆ | ಮಾಯ ಪೊಪ್ಪಳೀ ಚೌಕಳೀಸೀರೆ | ಕನ್ನಡಿಕೆತ್ತಿದ ಕರಿಬಣ್ಣದಸೀರೆ | ದ್ಯುಮಣಿಯಂತೆಬೆಳಗುವಬಿಳಿಸೀರೆ | ಕಾಡಿಗ್ಗಣ್ಣು ಕಲಾಬತ್ತುಸೀರೆ | ರು ಮಾಲುಲಿಂಚಿನ ಘನತರಸೀರೆ | ಶುಕಮುನಿಯು ವರಕೊಡಿಸಿದಸೀರೆ | ರಮೆಯುಡುತಿಹುದಾಪುತಾಣಿಸೀರೆ| ಪಾರ್ವತಿಯುಡುತಿಹ ಪೈಠಣಿಸೀರೆ| ಸರಸ್ವತಿಯುಡುತಿಹ ಶುಭ್ರದಸೀರೆ | ತಾಮ್ರವರ್ಣ ಅರುಂಧತಿಯಳ ಸೀರೆ | ಮೇಘವರ್ಣ ಶಚೀದೇವಿಯಸೀರೆ | ಅರುಣವರ್ಣಸ್ವಾಹಾದೇವಿ ಯಸೀರೆ || ಭ್ರಮರವರ್ಣ ಶ್ಯಾಮಲೆಯಳಸೀರೆ | ನೀಲವರ್ಣ ಮಹಾ ದುರ್ಗೆಯಸೀರೆ | ಚಂದ್ರಗಾವಿಕಾಳಿಯಳಾಸೀರೆ | ಸಂಜೆಗೆಂಪು ಅಂಜನೆ ಯಳಸೀರೆ | ವಿಚಿತ್ರತರ ಚಿತ್ರಲೇಖೆಯಸೀರೆ | ಸರ್ವಲೋಕಗಳತೋರು ವಸೀರೆ | ಸರ್ವದೇಶಗಳಾತಿಳಿಯುವಸೀರೆ | ಶಂಖಚಕ್ರವಂಕಿತವಹಸೀರೆ |

ಪಂಕಜಗದೆ ಅಂಚುಗಳಿಹಸೀರೆ । ದಶಾವತಾರಗಳಿರುತಿಹಸೀರೆ । ಸಹಸ್ರ, ನಾಮವ ಬರೆದಿಹ ಸೀರೆ | ಹರಿಕೃಪೆ ಸುರಿದುದು ಸುರಿಮಳೆಸೀರೆ । ಖಳ ಕುಲನೆಲ್ಲವು ಕೆಟ್ಟಿತುವೋರೆ॥ಎಚ್ಚರಗೊಳ್ಳುತ ದ್ರೌಪದಿವಾರೆ - ನೋಟದಿ ಭೀಮಗೆ ಸಂಜ್ಞೆಯತೋರೆ || ನಡುಗಿತು ಸಭೆಯೆಲ್ಲ ||೧||

ವಚನ॥ ಈ ಪ್ರಕಾರ ದ್ರೌಪದಿ, ಉಟ್ಟಿರುವ ಸೀರೆ ಹರಿಕೃಪೆಯಿಂದ ಅನಂತವಸ್ತ್ರಗಳಾಗಲು ದ್ರೋಣ ಭೀಷ್ಮ ಮೊದಲಾದ ಸಜ್ಜನರುಗಳು ಹರಿಮಹಿಮೆಗೆ ಕಯ್ಮುಗಿದು ಪರವಶರಾಗಿ ನೋಡುತ್ತಿರಲು ಗಾಂಧಾರಿಯೇ ಮೊದಲಾದ ಸತಿಯರ ಗುಂಪು ಆಶ್ಚರ್ಯಪಡುತ್ತಿರಲು ದುರುಳರೆಲ್ಲರೂ ಬೆರಗಾಗಿರಲು, ಆಕಾಲದಲ್ಲಿ ದ್ರೌಪದಿಯು ಭೀಮಸೇನನನ್ನು ನೋಡಿ ಮಾತನಾಡುವ ಬಗೆ—

(ಹಾಡು)

ಏನು ನೋಡುತಿರುವೆಯೋ। ಕಲಿಭೀಮಾ| ಹೇ, ಭೀಮಾ ||ಪ|| ಮಾನಿನಿಯಳ ಹರ್ಷವು ನಿಸ್ಸೀಮಾ॥ಅನು॥ ಧರ್ಮಮುಳುಗಿ ಮಿಡುಕುವನು, ಧರ್ಮಪುತ್ರನನುಸರಿಸಿಹಪಾರ್ಥನು ||೧|| ಸಹದೇವ ನಕುಲರು ಧುರಧುರಿಪರು । ಸಾಹಸಸಾಗದೆ ಬಹುಜನ ದುರುಳರು ॥ ಏನು ||೨|| ನಿನಗೆ ಸಮಾನಪುರುಷರಿಲ್ಲೆಂದು । ಅನುದಿನ ಗುಣಿಸುತ್ತಿದ್ದೆನು ಗುಣಸಿಂಧೂ ||೩|| ದಾನವಾಂತಕ ಪೊಗಳುವ ನಡಿಗಡಿಗೆ । ಗೋಣ ಕುಯಿದೆ ಇನ್ನೇನು ಸಭೆಯೊಳಗೆ ||೪|| ಕಡೆಗಿರುವಳಮುಡಿ ಪಿಡಿದೆಳೆ ತಂದನ । ಕಡಿದು ತೊಡೆಗಳನು ಮುರಿಯುವನಣ್ಣನ ॥ ಏನ ||೫|| ಆಡಿದರೇನುಫಲವು ನಿನಗೆಂದಳು||ಮಾಡಿದುದೆಲ್ಲವ ಅನುಭವಿಸುವೆ ಈಗಲೂ

||ಏನು ||೬|| ಶೇಷಗಿರೀಶನು ಮಾನರಕ್ಷಿಸಿದನು-ದೋಷಕಂಜಿ ಬಿಟ್ಟಿರಿ ನೀವೆಂದೆನ್ನನು ||ಏನು ||೭||

||ಕಂದ||

ಭಾಮಿನಿಯ ನುಡಿಯ ಕೇಳುತ | ಭೀಮನು ಕೋಪಾಗ್ನಿಯು ಕ್ಕುತಲಿ ಭುಗಿಲೆನ್ನಲ್ । ಕಾಮುಕರ ಬಿಡದೆ ನೋಡಲು । ತಾಮಸರಿಗೆ ಪ್ರಳಯಭೈರವನೆಂದು ಕಾಣಲ್||೧||ಘುಡಿಘುಡಿಸಿ ಭೀಮಪಲ್ಗಳ| ಕಡಿ ಯುತ ಹೂಂಕರಿಸುತ ಸಭೆತುಡಿಕಿದ ಕಯ್ಯೊಳ್|ಕಡುಮೂರ್ಖನ ಕರುಳ ಬಗೆದು| ಮುಡಿಸುವೆ ಸತಿಯಮುಡಿಗೆಂದುನೆನೆದೊಳು ಮನದೊಳ್||ಅಡಿ ಯಿಡುತಲಿಹೂಂಕರಿಸಲು|ಗಡಬಡಿಸುತ ಖೂಳನೋಡೆ,ಸಭೆನಡುಗಲ್‌ಹಾ|| ಕಡೆಗಾಲಮೃತ್ಯುಬಂದನು | ತಡೆಮಾಡದೆ ಯೋಡಿರೆಂದು ಭೀಷ್ಮನು ಕೂ ಗಲ್||ಕರ್ಣನು ಶಕುನಿಯು ಸೈಂಧವ | ಕರ್ಣದೊಳದನಾಲಿಸುತ ಪಲಾ ಯನವಾದಾ||ವರ್ಣನೆವರ್ಣೆಸತೀರದು || ನಿರ್ಣಯಕುರುಪತಿಗೆ ಮರಣ ತಪ್ಪದು ಎಂದರ್ ||೪|| ಅಂಧನಸುತ ದುರ್ಯೋಧನ | ಮುಂದಾಗಿಯೆ ಓಡಿ ಭೀಷ್ಮನಹಿಂದೆ ನಿಲ್ಲೇ । ಅಂಧಬಲುನೊಂದು ಮಗನನು | ಕೊಂ ದನು ಕಲಿಭೀಮನೆಂದು ಕಳವಳಗೊಳ್ಳಲ್ ||೫|| ನಾರಿಯರೆಲ್ಲರು ಧರೆ ಯೊಳು-ಚೀರುತೆ ಹೊರಹೊರಳಿಮೂರ್ಛೆ ಪೊಂದುತಮತ್ತಾ|| ಸೋರುವ ಕಣ್ಣಿಂ ನೋಡುತ | ಧೀರನು ಬರುತಿಹನು ತನ್ನ ಸತಿಯೆಡೆಗೆಂದರ್ ||೬||

ವಚನ|| ಈ ಪ್ರಕಾರ ಭೀಮನು ಗದೆಯಂ ತುಡುಕಿ ಬ ರಲು ದುರುಳರೆಲ್ಲರೂ ಪಲಾಯನ ಹೊಂದಲು ಅಂಧನೃಪನು ಮಗನಳಿವು ನಿಶ್ಚಯವೆಂದಿರಲು ಭೀಷ್ಮನಾಸೊಗಸು ನೋಡು ತ್ತಿರಲು ಆ ಕಾಲದಲ್ಲಿ ಭೀಮನು ಸತಿಯಬಳಿಗೆ ಬಂದು ಪಾಂ ಚಾಲಸುತೆಯಂ ಆದರಿಸಿದ ಬಗೆ---

(ಆರ್ಯಾ)

ಹೆಬ್ಬುಲಿಯಂದದೊಳಬ್ಬರಿಸುತ ಬರೆ|ತಬ್ಬಿಬ್ಬಾಯಿತುಸಭೆಯೆಲ್ಲಾ| ಕೊಬ್ಬುಮುರಿವೆ ಕುರುಪನ ಅವನನುಜನ| ಇಬ್ಬರು ನೋಡಿದರವರಿಲ್ಲಾ|| ನೊಂದಿಹಳೀಸತಿಯೆಂದು ಸಮೀಪಕೆ ಬಂದು ನುಡಿಸಿದನು ನಿಜಸತಿಯಾ|| ಕಂದಿತೇಕೆ ಮುಖಮಂಡಲ ಕಣ್ದೆರೆಯೆಂದೆನುತನೇವರಿಸಿದ ಮುಡಿಯ || ಬೆದರದಿರೆನ್ನುತ ಬೆನ್ನಂ ತಟ್ಟಲು | ಚದುರೆಯು ಕಣ್ಣಾರಳಿಸಿ ನೋಡೇ || ಮುದದೊಳು ಮುದ್ದಿಸುತಾಲಿಂಗಿಸುತಾ | ಆದರಿಸಿದ ಜನ ನಲಿದಾಡೇ || ಘನಸಿಂಹಧ್ವನಿ ಮಾಡುತ ಫಲುಗುಣ | ಧನುಪಿಡಿಯುತ ಬಂದನುಅಲ್ಲೀ|| ಮಿನುಗುವ ಖಡುಗವ ಝಳಪಿಸುತಲಿ| ಸಹದೇವನಕುಲರಾಟೋಪದಲೀ|| ಹಿಡಿಹಿಡಿ ಕುರುಪನ ಅವನನು ಜನಮೇಣ್|ಕಡಿಕಡಿನೂರ್ವರ ತಲೆಯೆಂದೂ|ಗಡಬಡಿಸುತಲಾಯುಧಗಳ ಝಡಿಯಲು ನಡುನಡುಗಿತು ಸಭೆಮನ ನೊಂದೂ||೫||ಕೆದರಿದ ಕೇಶದಿ ಸಭೆಚದರಿತು ಅತ್ಯದ್ಭುತವಾಯಿತು ಗುಂಪಿನಲಿ | ಬೆದರುತ ಮುಯ್ಮರಿದನು ಅಂಧನು | ಸತಿಗಾಂಧಾರಿಯು ಬಲುಬಳಲಿದಳು ||೬|| ಶೇಷಗಿರೀಶನ ದಾಸನು ವಿದುರನು ಹಾ ಕೆಟ್ಟರು ದುರುಳರು ಎಂದಾ | ಘಾಸಿಪಡುವ ಅಣ್ಣನ ಸಂತೈಸುತ|ಮೋಸದಿ ಮಾಡಿದಫಲವೆಂದಾ ||

ವಚನ|| ಈ ಪ್ರಕಾರ ಸಭೆಯಲ್ಲಿ ಭೀಮಸೇನನ ಹೂಂಕಾರದಿಂದಲೂ ಸಹದೇವ ನಕುಲರ ಘರ್ಜನೆಯಿಂದಲೂ ಸಭೆ, ಅಲ್ಲಕಲ್ಲೋಲವಾಗಿ ಆಸ್ಥಾನ ಚದರಿ, ನಾರಿಯರೆಲ್ಲ ಮುಯ್ಮರಿಯೆ, ದ್ರೋಣಭೀಷ್ಮಾದಿ ಸಜ್ಜನರು ಬೆರಗಾಗಿ ದುರ್ಜನರು ಪಲಾಯನ ಹೊಂದಿ, ಆ ಕಾಲದಲ್ಲಿ ಧೃತರಾಷ್ಟ್ರಗಾಂಧಾರಿಯರಿಗೆ ಶರಹೊಡೆದಂತಾಗೆ, ಮುಯ್ಮರೆತು, ನೆಲದಮೇಲೆ ಬಿದ್ದು

ಹೊರಳುತ್ತ ಮಗನಳಿವಂ ನಿಶ್ಚಯಿಸಿ, ರೋದಿಸುತ್ತಿರಲು, ಆಗ ವಿದುರನು ಇದೇನದ್ಭುತವಾಗಿದೆಯೆಂದು ಧೃತರಾಷ್ಟ್ರರಾಯನ ಬಳಿಗೆ ಓಡಿಬಂದು ಎತ್ತಿ ಕರುಡಿಸಿ [?] ಉಪಚರಿಸಿ, ಎಚ್ಚರವನ್ನಿತ್ತು, ಮನನೊಂದು ಅಣ್ಣನೊಡನೆ ಮಾತನಾಡುವ ಬಗೆ—

ರಾಗಾ—(ಹಾಡು) ||ಶಿರಿನಲ್ಲಾ||

ಕೆಡುವೆಯಲ್ಲಾ ಹಾ ನುಡಿವರು ನಿನಗಿಲ್ಲ||ಪ||ದುರುಳರಮಾತಿಗೆ-ಮರುಳಾದೆಯಲ್ಲಾ | ದುರಧೀರನು ಪಾರ್ಥಮಲ್ಲಾ ಹಾ ! ||೧|| ಗುರುಭೀಷ್ಮನನುಡಿ-ಕೇಳುವರಿಲ್ಲ|ಧರೆಯೊಳುಅಪಕೀರ್ತಿ ಬಂತಲ್ಲಾ ||ಹಾ ||೨|| ಹೆತ್ತಮಕ್ಕಳ ಅರ್ಥಿಪಡಿಸುವೆಯಲ್ಲ-ಮೃತ್ಯುವಿಗೆ ತುತ್ತಾದರೆಲ್ಲಾ ಹಾ|-|| ಕೋಪಹೆಚ್ಚಿತು ಅವರು ತಡೆಯುವರಲ್ಲ-ಶ್ರೀಪತಿಕಾಯಬೇಕಲ್ಲಾ||ಹಾ|| ಪೂರ್ವವೈರದಿ ಶಕುನಿ ಮಾಡಿದನಲ್ಲಾ- ಓರ್ವರು ಉಳಿವುದಕಾಣೆನಲ್ಲಾ ಹಾ || ೫ || ಪುತ್ರಮಿತ್ರಕಳತ್ರ ತುಂಬಿಹುದೆಲ್ಲಾ - ವ್ಯರ್ಥಮಾಡದೆ ಬಿಡನಲ್ಲಾ ||ಹಾ ||೬|| ದೋಷಿಗಳಾದಿರಿ ಲೇಸು ನಿಮಗಿಲ್ಲಾ | ಶೇಷಗಿರೀಷನು ಬಲ್ಲಾ - ಹಾ ||೭||

ವಚನ|| ಈಪ್ರಕಾರ ವಿದುರನು ಅತ್ಯಂತ ವ್ಯಾಕುಲದಿಂದ, ಚದರಿ ಓಡಾಡುವ ಜನರನ್ನೂ ಭಯಂಕರವಾದ ಪಾಂಡವರ ಕೋಪವನ್ನೂ ನೋಡಿ, ಮನದಲ್ಲಿ ದಿಗಿಲುಗೊಂಡವನಾಗಿ ಕುರುವಂಶದಳಿವುಕಾಲವೆಂದು-ಮನದಲ್ಲಿ ನೆನೆದು,ಕೃಷ್ಣನ ಪಾದಾರವಿಂದವನ್ನು ಮನದಲ್ಲಿ ಸ್ಮರಣೆಮಾಡಿ ಅಂಧನೃಪಗೆ ಹೇಳುವ ಬಗೆ—

(ದ್ವಿಪದೆ)

ಏನು ಮಲಗಿಹೆ ಅಂಧ ಕಾರ್ಯ ಹದಗೆಟ್ಟಿಹುದು | ಏಳು ಬೇ

ಗನೆ ದ್ರುಪದ ಸುತೆಯಸಂತೈಸುವೊಡೆ||ದ್ರುಪದ ಪುತ್ರಿಯ ಸೀರೆ ಸುಲಿಯ ಲೇತಕೆ ಇವನು | ಎಂದು ಕೈಹಿಡಿದೆತ್ತಿ ಕುಳ್ಳಿರಿಸಲಂಧನೃಪ || ಏನಯ್ಯ ವಿದುರ ಮಗನಳಿವೊ ಉಳಿವೊ ಪೇಳು | ಪಾಪಿಮಕ್ಕಳಪಡೆದು ಸಂತಾಪ ಧೂಮಕೇತುಗಳು ಓಡಾಡುವುವು ಊರೆಲ್ಲ || ಹದ್ದುಕಾಗೆಗಳು ಒಂದೆರ ಗುವುವು ತಲೆಮೇಲೆ | ಕೆನ್ನೀರಮಳೆಸುರಿವುದದುಶುಭವೆ ನೀವ್‌ನೋಡಿ | ಕಲ್ಲುಪ್ರತಿಮೆಗಳು ಮಾತಾಡುವುವು ಚಿತ್ರವಿದು | ಪ್ರತಿಸೂರ್ಯನುದಿಸಿ ರುವ ಕಡೆಗಾಲ ನಿಮಗೆಇದೊ | ಉಡುಗಣಗಳುದುರುವವು ನಡುಹಗಲಿ ನಲಿನೋಡಿ | ನರಿನಾಯಿಗಳುಬಂದು ಸಭೆಯೊಳಗೆ ಚರಿಸುವವು | ಕರಿತು ರಗಕಣ್ಣೀರು ಸುರಿಸುತ್ತನಿಂತಿಹುದು|ಸಿಡಿಲುಬಿದ್ದಂತೆ ಉಪ್ಪರಿಗೆಮನೆ ಬೀ ಳುವುದು | ಕತ್ತಲೆಯುಮುಸುಕುತಿದೆ ಅಡಿಗಡಿಗೆ ಸಭೆಯೊಳಗೆ || ಏಳಿ ತಡವೇಕೆನಲು ಎದ್ದುನಿಂತನು ಅಂಧ | ಸತಿಯೊಡನೆ ಬರುತಲಿರೆ ಕಂಡನಾ ಧರ್ಮಸುತ | ಓಡುತ್ತಬಂದು ಭೀಮನ ಅಡ್ಡಗಟ್ಟಿದನು || ಬೊಪ್ಪಬರು ತಿಹನೋಡು ದುಡುಕುಮಾಡಲುಬೇಡ | ಗಾಂಧಾರಿಬರುತಿಹಳು ಸೈರಿಸೈ ಫಲುಗುಣನೆ | ನಕುಲಸಹದೇವರೇ ಕೋಪನಿಲ್ಲಿಸಿರೀಗ | ಸತ್ಯವಂತರು ಎಂದು ಕೃಷ್ಣಸಲಹಿದನೆಮ್ಮ | ಸತ್ಯವೇಪರಲೋಕ ಸಾಧನೆಗೆಕಾರಣವು | ಸತ್ಯವನುಬಿಟ್ಟವನೆತ್ತಪೋದರುಶೂನ್ಯ | ಆದರಿಂದತಂದೆಯನು ಆದರಿಸಿನೀ ವೀಗ | ನಿಮಗೆಸರಿಯಾದವರು ಮೂರುಲೋಕದೊಳುಂಟೆ | ನೀಮುನಿ ದರಾರುನಿಲ್ಲುವರಿದಿರೆ ಭೀಮನೆ | ಕೋಪವನುಸೈರಿಸೆಂದೆನುತಸಂತೈಸು ತಿರೆ || ಅನಿತರೊಳುಬಂದನಾ ಅಂಧನೃಪಸತಿಸಹಿತ | ಧುರಧುರಿಸಿನೋಡಿ ದನು ಸತಿಪತಿಗಳನುಭೀಮ || ಇವನಲ್ಲವೇನಮ್ಮ ಕರೆಸಿನೋಯಿಸಿದವನು| ಇವನಮುಂದಾಗಿ ಬಲಿಕೊಡುವೆಭೂದೇವಿಗೆ || ಆಮೇಲೆ ಇವನಮಕ್ಕಳ್ಳ ನೂರ್ವರನುಮುಱವೆ | ನೆಂದು ಪಲ್ಗಳಕಡಿಯೆ ಓಡಿಬಂದನುಪಾರ್ಥ |

ಗದೆಹಸ್ತವನುಪಿಡಿದು ನಿಲ್ಲಿಸುತನುಡಿದನಾ | ಅಣ್ಣನಾಜ್ಞೆಯಮೀರಿ ನಡೆವರುಂಟೇಜಗದಿ || ಭಾರಕರ್ತನುನಮಗೆ ದ್ವಾರಕಿಯೊಳಿರುತಿಹನು | ಎಂದು ಸಂತೈಸಿದನು ಮಾರುತಿಯುಫಲ್ಗುಣನು | ನಡುಗುತಲಿನಿಂತಿರುವ ಧೃತರಾಷ್ಟ್ರಭೂಪತಿಯು | ಆಗಧರ್ಮಜಬಂದು ಅಂಧನಿಗೆವಂದಿಸಲು| ತೆಗೆದುತಕ್ಕೈ| ಸಿದನುಭೂಪತಿಯು ಧರ್ಮಜನು | ಪಾರ್ಥಸಹದೇವನಕುಲರುಬಂಧು ಪದಕೆರೆಗೆ | ಮನ್ನಿಸುತ ತೆಗೆದಪ್ಪಿದನು ಬೇರೆಬೇರವರ || ಕಣ್ಣುಕೆಂಪೇರೆನಿಂತಿಹಭೀಮದೂರದಲಿ | ದ್ರುಪದಸುತೆನೋಡಿದಳು ಅತ್ತೆಮಾವಂದಿರನು |ಶೇಷಗಿರಿವಾಸನಂ ಸ್ಮರಿಸಿದಳುಮನದಲ್ಲಿ ||

ವಚನ || ಈ ಪ್ರಕಾರ ವಿದುರನ ಮಾತಿನಿಂದ ಅಂಧನೃಪನು ಗಾಂಧಾರಿಸಹಿತ ಪಾಂಡವರಬಳಿಗೆ ಬಂದು ಮಕ್ಕಳ ಮರಣಭೀತಿಯಿಂದ ತಪಿಸುತಿರುವ ಮಾತಾಪಿತೃಗಳನೋಡಿ ಧರ್ಮಾರ್ಜುನ ನಕುಲಸಹದೇವರು ವಂದಿಸಲು ಭೀಮಸೇನನು ಕೋಪದೊಳು ದೂರದಲ್ಲಿ ನಿಂತಿರುವನಾತನೊಳು ಮಾತನಾಡಲಂಜಿ, ದ್ರುಪದಾತ್ಮಜೆಯ ಸಂತೈಸಬೇಕೆಂದಿರುವ ಸಮಯದಲ್ಲಿ ಇತ್ತದುರ್ಯೋಧನಾದಿಗಳು ಯೋಚಿಸಿ, ಸಭೆಯಲ್ಲಿ ವಸ್ತ್ರಗಳ ಪರ್ವತವೂ ಅನರ್ಘ್ಯವಸ್ತುಗಳೂ ಇರುವವನ್ನೆಲ್ಲ ಅಪಹರಿಸಬೇಕೆಂದು ನೇಮಿಸಿದ ಬಗೆ_

(ಹಾಡು)

ಹರಿಕೃಪೆಯುಳ್ಳವರಿಗೆ ಜಯವಹುದೋ ಪರಮಾನಂದವಿದು | ಹರಿನಾಮವೆಪರಬ್ರಹ್ಮಾದಿಗಳಿಗೆ ತಾರಕಮಂತ್ರವಿದು ||ಪ|| ವಸ್ತ್ರವೆಲ್ಲವ ಜೊಕ್ಕಸದಿ ಬಹುಜತನದೊಳಿರಿಸೆನಲು | ಚಿತ್ತದಿತಿಳಿದಾ ದ್ರುಪದಾತ್ಮಜೆ ಕಡೆಗಣ್ಣಿಲಿನೋಡಿದಳು || ಹರಿ ||೧|| ಕೋಪಶಿಖೆಯು ಝಳಸೋಂಕಿತು

ಸೀರೆಯುಪರ್ವತಕೇನೆಂಬೇ | ಪಾಪಿಗೆದೊರೆವುದೆ ಭುಗಿಲೆಂದುರಿದುದು ಆಹಾಕಾರವು ತುಂಬೇ ||೨|| ಅಂಬರತುಡುಕಿತು ಬಿಡುಗಣವೂರೊಳಗೇನೆಂಬೇ | ಹಂಬಲಿಸಿತು ಖಳರಚಿಸಿಹಸಭೆ ಬೆಂದುರಿದು ಬಿದ್ದಿತು ಕಡೆಗೆ ||೩|| ಕೂಡಿದಜನಗಳೋಡಿದರೆಲ್ಲಾ ಮಾತಾಡಿದರಲ್ಲೀ||ಕೇಡುತಪ್ಪುವುದೇವಮೂಢಜನಗಳಿಗೆ ಆಡಲೇತಕೆಇಲ್ಲೀ ||ಹರಿಕೃಪೆ ||೪|| ಶೇಷಗಿರೀಶನು ದಾಸರಮನದೊಳು ವಾಸವಾಗಿಹನು | ಸಾಸಿವೆಯಷ್ಟಾದರುಆಯಾಸವ ಕೊಡನಾಮುರಹರನೂ ||ಹರಿಕೃಪೆ||

ವಚನ || ಈ ಪ್ರಕಾರ ದ್ರೌಪದಿಯ ಕೋಪಶಿಖಿಯಿಂದ ವಸ್ತ್ರದರಾಶಿ ಬೆಂದುರಿದವಾ ಅಗ್ನಿಯಿಂದ ಖಳ ಪಗಡೆಯಾಡುವ ನಿಮಿತ್ತ ರಚಿಸಿದ ಸಭೆಯೂ ಬೆಂದು ಉರಿದುಬೀಳಲು ಆ ಅಗ್ನಿಯಿಂದ ದುರ್ಯೋಧನ ದುಶ್ಶಾಸನ ಕರ್ಣಶಕುನಿಗಳ ಮಂದಿರಗಳು ಬೆಂದು ಉರಿಯೆ ಪಟ್ಟಣವೆಲ್ಲಾ ಗಾಬರಿಯಾಗಿರಲು, ಖಳಖಿನ್ನನಾಗಿರಲು ಇತ್ತ ಪಾಂಚಾಲತನುಜೆ, ಅಂಧನೃಪನನ್ನು ನೋಡಿ ಮಾತನಾಡುವ ಬಗೆ--

ಕಂದ || ಬಹುದೂರನಡೆದು ಬಂದಿರಿ | ಬಹುಕಾರ್ಯವಮಾಡಿಸಿದಿರಿನೀವ್ ಕುಳಿತಲ್ಲೇ || ಬಹುಮತಿತಂದಿರಿ ಸುತರಿಗೆ | ಬಹುಪರಿಯಲಿ ಪಾಲಿಸಿದಿರಿ ಎಂದಳುನಾರೀ ||೧|| ಕಲಕುವ ಖಳಕುಲಶರಧಿಯ | ಕಲಿಭೀಮನಗದೆಯೆಹೊಯ್ಲ್ಲ ನೋಡಾಪರಿಯಾ|| ಛಲದೊಳುನೂರ್ವರ ತಲೆಗಳ | ನೆಲಕಿಳುಹದೆಬಿಡನು ನೋಡಿರೆಂದಳುನಾರೀ ||೨|| ಕಡೆಯಲಿನೀವೇ ಕಾಂಬಿರಿ | ಕಡೆಗಾಲವತಂದುಕೊಂಡಿರಾಡುವುದೇಕೇ || ಕಡಿದಿಡುವಕಲಹಕಿಟ್ಟಿರಿ | ಕಡೆಹಾಯ್ಸಿದನೆಮ್ಮ ಶೌರಿಯೆಂದಳುನಾರೀ ||೩|| ಮುಡಿಪಿಡಿದೆಳದನಕರುಳನು | ಮುಡಿಯಲಿನಾಮುಡಿದು ರಕ್ತದೋಕುಳಿಯಾಡೀ|

ಖಡುಗದಿ ಚರ್ಮವಸುಲಿದಾ | ಉಡಿಗೆಯನಾನುಡುವೆನೆಂದು ನುಡಿದಳು ನಾರೀ ||೪|| ಬಾಚಣಿಗೆಯಮಾಡಿಸುವೆಂ | ನೀಚನಪಲ್ಲಗಳನು ಕಿತ್ತು ಯಾಚಿಸಿದವರ್ಗೇ | ಯೋಚನೆಯಿಲ್ಲದೆಕೊಡುವೆನು|ಸೂಚಿಸಿಹೆನುಮರೆಯ ಬೇಡಿರೆಂದಳುನಾರೀ ||೫|| ಗುಂಡಿಗೆಯ ಬಗೆದು ಬಸಿರೊಳು | ಮಂಡೆಯತುರುಬನ್ನುನಾನಲಿದುತಿದ್ದುತಲಾ || ಗಂಡುಲಿಭೀಮನತೊಡೆಯೋಳ್| ಮಂಡಿಸಿ ರಣದಾಟನೋಳ್ಪೆನೆಂದಳುನಾರೀ ||೬|| ಅದುವರೆಗಿದ್ದಂತಿರುವೆನು | ಬದಲಂನಾಮುಡಿಯೆಪೂವ ತಿಲುಕವನಿಡೆನಾ || ಹೃದಯೇಶರೊಳಾರ್ನಡೆಯಿಪ | ಚದುರರೊ, ಎನ್ನೆದು ರೆನಿಲಲಿ ಎಂದಳುನಾರೀ ||೭||

ವಚನ|| ಈಪ್ರಕಾರವಾಗಿ ದ್ರೌಪದೀದೇವಿಯು ಧೃತರಾಷ್ಟ್ರನಮುಂದೆ ದುಶ್ಯಾಸನನ ನಿಮಿತ್ತದಿಂದ ಇತ್ಯಾದಿ ಶಪಥದ ಮಾತುಗಳಾಡಲು, ಧರ್ಮರಾಯನು ಬೆರಗಾಗಿ ಮೌನದಿಂದಿರಲು, ನಕುಲಸಹದೇವರು ಬಹು ದುರ್ಘಟವಾದ ಶಪಥವೆಂದು ಮರುಗುತ್ತಿರಲು ಆ ಕಾಲದಲ್ಲಿ ಇಂದ್ರಕುಮಾರನಾದ ಅರ್ಜುನನು ನಿಸ್ಸೀಮ ಭೀಮಸೇನನಿಗೆ ಸಂಜ್ಞೆಮಾಡಲು, ವಾಯುಪುತ್ರನಾದ ಭೀಮಸೇನನು ತನ್ನ ಸತಿಯಾದ ದ್ರೌಪದಿಯನ್ನು ಸಂತೈಸಿದ ಬಗೆ–

(ಹಾಡು)

ಹಸಿದ ಹೆಬ್ಬುಲಿಯಂತೆ ಬಂದನಾಭೀಮ | ಶಶಿಮುಖಿಯಿದಿರಲ್ಲಿ ನಿಂದನಿಸ್ಸೀಮ ||ಪ|| ಕುರುಡನೊಡನೆ ಮಾತನಾಡಿಫಲವೇನು | ದುರುಳರ ಮುರಿದೀಡಾಡುವೆನು ||೧|| ಅಣ್ಣನಾಜ್ಞೆಯೊಳೀಗ ಸುಮ್ಮನೆ ಇರುತಿವೆನು | ಚನ್ನೆನಿನ್ನಯಪಂಥಕ್ಕೆಲ್ಲಹೊಣೆನಾನು ||೨|| ಬಿನ್ನಾಣ ಮಾತನಾಡಲು ಬಂದ ಅಂಧನು | ಇನ್ನು ಏನೇನುಮಾಡುವ ನೋಡುತಿರುವೆನು

||ಹಸಿದ||೩|| ಘುಡಿಘುಡಿಸುತ ಧೃತರಾಷ್ಟ್ರನ್ನ ನೋಡಲು | ಗಡಗಡ ನಡುಗಿದರಾಸತಿಪತಿಗಳು || ಹಸಿದ || ೪ || ದೋಷಕೆಲಸವಮಾಡದಿರು ತಮ್ಮ ಎಂದನು | ಶೇಷಗಿರೀಶನಿರುವನೆಂದ ಯಮಜನು ||ಹಸಿದು||೫||

ವಚನ || ಈ ಪ್ರಕಾರ ಭೀಮಸೇನನು ಸತಿಯಂ ಸಂತೈಸಿ ಸತಿಯಾಡಿದ ಮಾತಿಗೆ ತಾನು ಹೊಣೆಯಾಗಿ ಪಾಂಚಾಲಿಯಂ ಉಪಚರಿಸಲಾವೇಳೆ ಉಕ್ಕಿದವುಕೋಪಶಿಖಿ ಘುಡಘುಡಿಸಿ ಧೃತರಾಷ್ಟ್ರನ್ನ ನೋಡಲು ಅಂಧನೃಪನು ಭಯಪಡುತ್ತಿರುವ ಕಾಲದಲ್ಲಿ ಧರ್ಮರಾಯನು ಭೀಮಸೇನನನ್ನು ಉಪಚಾರವಾರ್ತೆಯಿಂದ ಸಂತೈಸುತ್ತಿರಲಾವೇಳೆ, ಧೃತರಾಷ್ಟ್ರನು ದ್ರೌಪದಿಯನ್ನು ಬೇಡಿಕೊಂಡಬಗೆ–

(ಹಾಡು)

ಕ್ಷಮಿಸಬೇಕಮ್ಮಾ– ತಪ್ಪುಗಳನ್ನು– ಕ್ಷಮಿಸಬೇಕಮ್ಮ || ಪ|| ರಮೆಯರಸನು ನಿನಗೊಲಿದಿಹನಮ್ಮ ||ಅನು|| ದುರಳನು ಮಗನು– ಅವನಾಟವ–ಸ್ಮರಿಸಬಾರದನು–ಅಂಧನುನಾನು||ಪರಮಪಾವನಪುಣ್ಯಾಶೀಲರ ಸತಿ ನೀನು ||ಕ್ಷಮಿಸ||೧|| ನಿನ್ನನೆನೆದವನು–ಭೂಮಿಯೊಳು–ಘನ್ನಮಹಿಮನು ಮನ್ನಿಸಿಕಾಯೆ–ಚೆನ್ನಕೇಶವನು–ನುಡಿವುದೇನು || ಸರಿನಿನಗಾರೂ ಸ್ತ್ರಿಯರೊಳಿಲ್ಲ ವರಗಳಬೀರು– ಬೇಡುವೆನಾನು || ಕರಿಣಿಸಿಕಾಪಾಡಿದಳೆಂಬರು ಸುಜನರು ||೨|| ಸುಪವಿತ್ರಕಾಯೆ ನಿನಗೆಬಹು ಅಪರಾಧಿತಾಯೆ | ಕರುಣಾಸಿಂಧು ನೃಪಪಾಂಡುಪುತ್ರರ ಪಟ್ಟದರಸಿಯೆ ||ಕ್ಷಮಿಸ||೩||

ವಚನ || ಈ ಪ್ರಕಾರ ಧೃತರಾಷ್ಟ್ರರಾಯನು ಪಾಂಡವರ ಸತಿಯನ್ನು ಬೇಡಿಕೊಳ್ಳಲು ಆ ಮಾತು ಒಡಂಬಡದೆ ದ್ರೌಪದಿಯು ಮೌನದಿಂದಿರಲು, ಪುನಃ ದೃತರಾಷ್ಟ್ರರಾಯನು

ತನ್ನ ಮನೋನಿಶ್ಚಯವಾದ ಮಾತನ್ನು ವಿನಯದಿಂದ ಹೇಳುವ ಬಗೆ—

ರಾಗ—(ಹ್ಯಾಂಗೆ ನಿನ್ನ ಚರಣ ಕಾಂಬೆನು)

ಬೇಡುವರವತಾಯೇ-ಕೋಪವ-ಮಾಡದೆ ದ್ರೌಪದಿಯೇ ||ಪ|| ಖೋಡಿ ಅಂಧನೆಂದಾಡಲು ಸಲ್ಲದು | ನೀಡುವೆ ಕೇಳಿದುದೆಲ್ಲವ ಗುಣಮ ಣಿಯೆ ||ಅ|| ಪಾಪಿಯಾದೆನಾನೂ- ಮನಸಂತಾಪವ ಬಿಡುನೀನು | ಕಾ ಪುರುಷರ ಬಿರುನುಡಿಗಳ ಮರೆತು ಕೃಪಾಳು ಪಾಲಿಸಿದರೆಂಬರವರನು || ಬೇಡುವರವ ||೧|| ಎಂದ ಮಾತಕೇಳಿ-ಪರಮಾನಂದವನ್ನು ತಾಳೀ | ಸುಂದರರಯ್ವರ ಬಿಡಿರವರಾಯುಧಗಳತಂ||ದುನೀಡಿರವರ ಕೈಗಳಲೀ || ಬೇಡು ||೨|| ಪತಿಗಳಯ್ವರನ್ನೂ-ಕ್ಷಿತಿಪತಿ–ಸತಿಗೆ ಒಪ್ಪಿಸಿದನು | ಹಿತ ದಲಿ ಅವರಾಯುಧಗಳ ಕೊಟ್ಟನು ಮತಿವಂತರು ಪೊಗಳಲು ಧೃತರಾ ಷ್ಟ್ರನು || ಬೇಡು ||೩|| ಇಂದ್ರಪ್ರಸ್ಥವನ್ನೂ- ದೊರೆತನ-ಚಂದದಿ ಧರ್ಮಜನು | ಪೊಂದಿದ ಸಕಲಸಂಪತ್ತನುಭವಿಸಿರಿ || ಎಂದು ಪಾಂಡವ ರನು ಉಪಚರಿಸಿದನು || ಬೇಡು ||೪|| ರಮಣರನ್ನು ನೋಡಿ-ಲಕ್ಷ್ಮೀ ರಮಣನ ಕೊಂಡಾಡಿ | ರಮಣ ಶೇಷಗಿರಿವಾಸ ವೆಂಕಟರಮಣನ ಮನ ದೊಳು ಧ್ಯಾನವಮಾಡೀ || ಬೇಡು ||೫||

ವಚನ|| ಈ ಪ್ರಕಾರ ಧೃತರಾಷ್ಟ್ರರಾಯನು ದ್ರೌಪದಿ ಯ ಮನೋಭಿಪ್ರಾಯವಿದ್ದಂತೆ ಅಯ್ವರು ಪತಿಗಳನ್ನೂ, ಅವ ರಾಯುಧಗಳನ್ನೂ, ಅವರ ವಸ್ತ್ರಾಭರಣಗಳನ್ನೂ, ಅವರ ರಾಜ್ಯಭಂಡಾರಗಳನ್ನೂ, ಸಕಲ ಸಂಪತ್ತನ್ನೂ, ಪಾಲಿಸಲಾ ವೇಳೆ, ಪಾಂಡುಸುತರಯ್ವರು ಮನಸ್ಸಂತೋಷಪಟ್ಟರಾದ್ರೌಪ ದಿಯು ಆನಂದಪೊಂದಿದಳು. ದ್ರೋಣ, ಭೀಷ್ಮಾದಿ ನಾಯ

ಕರು ಹರ್ಷಗೊಂಡರಾಸಜ್ಜನ ನಾರಿಯರು ದ್ರೌಪದಿಯನ್ನು ಕೊಂಡಾಡಿದರು. ಆಕಾಲದಲ್ಲಿ—

(ಹಾಡು)

ಮಂದಾರ ಮಲ್ಲಿಕಾದಿ ಪುಷ್ಪವರ್ಷಕರೆದರು | ಬೃಂದಾರಕೇಂದ್ರರೆಲ್ಲ ನಿಂದು ಕರವಮುಗಿದರು ||ಪ|| ಗಂಧರ್ವ ಕಿನ್ನರ ಕಿಂಪುರುಷರೆಲ್ಲ ಗಾನ ಮಾಡಲು | ಧಿಂಧಿಮ್ಮ ಧಿಮಿಕೆಂದಪ್ಸರೆಯರು ನಾಟ್ಯವಾಡಲು || ಮಂದಾರ ||೧|| ಭೇರೀಮೃದಂಗ ನಾದ ಸೊಬಗು ಬುವಿಯ ತುಂಬಲು | ನಾರೀಮಣಿಯರೆಡಬಲದೊಳು ಚೌರಿಯಾಡಲು || ಮಂದಾರ ||೨|| ಭೂದೇವರೆಲ್ಲ ಪುಷ್ಪಫಲವ ಕಯ್ಗೆ ನೀಡಲು | ಭೂದೇವಿ ರಮಣ ಹರಕೆಗೊಳ್ಳುತಾಗ ನಮಿಸಲು || ಮಂದಾರ ||೩|| ದ್ರೋಣಾದಿ ಪ್ರಮುಖರೆಲ್ಲ ಬಂದು ಜಯಜಯೆಂದರು | ವೀಣಾದಿಗಾನ ಮಾಡುತಿರಲು ಜನರು ನೆರದರು || ಮಂದಾರ ||೪|| ನಾರೀಮಣಿಯರು ರತ್ನದಾರತಿಯನು ಕಂಡರು | ವೀರಾದಿವೀರ ಭೀಷ್ಮ ಬರಲು ಕಂಡರೆಲ್ಲರು ||೫|| ದೃಪದಸುತೆಯ ಕೂಡಿ ಪಾದಕ್ಕೆರಗಿ ನಿಂದರು | ಕೃಪೆಯೊಳಂದು ಮೈಯ್ಯತಡಹಿ ಸುಖಿಸಿರೆಂದರು ||೬|| ಪರಾಕು ಸ್ವಾಮಿಯೆಂದು ಚದುರರೆಚ್ಚರವ ಪೇಳಲು | ಪುರಾರಿವಂದ್ಯನೊಲುಮೆಯೆಲಲು ಸರ್ವರೂ || ಮಂದಾರ ||೭|| ತರಿಸಿ ವೀಳ್ಯ ಗಂಧ ಪುಷ್ಪ ಉಡುಗೊರೆಯನು | ತರವರಿಯುತ್ತ ಕೊಟ್ಟ ಹರುಷಗೊಂಡು ಧರ್ಮನು ||೮|| ಭಾರಕರ್ತನಮಗೆ ಶೇಷಗಿರಿಯೊಳಿರುವರೆ | ವಾರಿಜಾಕ್ಷಿ ಮಾನರಕ್ಷಿಸಿದನು ಶ್ರೀಧೊರೆ || ಮಂದಾರ ||೯||

ವಚನ|| ಈ ಪ್ರಕಾರ ಧರ್ಮಾರ್ಜುನ ಭೀಮ ನಕುಲ ಸಹದೇವರೈವರೂ ಸತಿಸಹಿತ ಹರಿಕೃಪೆಯಿಂದ ಸುಖಪಟ್ಟರೆಂಬ ಚರಿತ್ರೆಯನ್ನು ಜನಮೇಜಯರಾಯನಿಗೆ ವೈಶಂಪಾಯ

ನರು ಪೇಳಲು ಇಂದ್ರಸಭೆಯಲ್ಲಿ ಹರಿಯ ಕೊಂಡಾಡಿ ಮಂಗಳ ಪಾಡುವ ಬಗೆ—

## ಮಂಗಳಂ.

ರಾಗ—(ಧೀರವೀರನ ಕೊರಳಿಗೇ ಸುಮಹಾರ)

ಮಂಗಳಾರತಿಯೆತ್ತಿಪಾಡಿರೆ-ರಂಗನಾಥನ ನೋಡಿರೆ ‖ಪ‖

ಅಂಗನಾಮಣಿಯ ಸಲಹಿದ ಪಾಂಡುರಂಗನ ಭಜಿಸಿರೇ ‖ಅ‖

ನೆರೆದ ಸಭೆಯೊಳು-ಸೆರಗನೆಳೆಯಲು ತರಳೆ ಭೀತಿಯತಾಳಲು। [ದುರುಳನೆರಿಗೆಯನೆಳೆಯಲು] ಶರಣು ನೀನೇ-ವರದನೆನ್ನಲು ವರವನಿತ್ತಗೆ ಮುದದೊಳು [ಕರುಣವಾರ್ಧಿಗೆ ಭರದೊಳು] ಮಂಗಳಾರತಿ ‖೧‖

ಅಕ್ಷಯಾತ್ಮಕ ರಕ್ಷಿಸೈ ಕಮ-ಲಾಕ್ಷದೀ ನಳವಾನದಿಂ। ಶ್ರೀವಕ್ಷಬೇಡುವೆವೋದದಿಂ ‖ ರಕ್ಷನೀನೆನೆ ಚಪ-ಲಾಕ್ಷಿಯಾ ಕ್ಷಣ-ರಕ್ಷಿಸಿದನ್ನೈ ಕರುಣದಿಂ (ಅಕ್ಷಯ ಪ್ರದಾನದಿಂ) ‖ ಮಂಗಳಾರತಿ ‖೨‖

ನಿತ್ಯನಿರ್ಮಲ-ನಿರ್ವಿಕಲ್ಪನ ನಿತ್ಯತೃಪ್ತನ ಭಜಿಸಿರೆ। (ಭಕ್ತ್ಯಧೀನನ ಬೇಡಿರೆ ‖) ಸತ್ಯವಿಕ್ರಮಶೇಷಶೈಲನಿಕೇತಗೇ ಜಯವೆನ್ನಿರೇ (ಚಿತ್ತಶುದ್ಧಿಯ ಪಡೆಯಿರೆ ‖೩‖

‖ ಶ್ರೀಕೃಷ್ಣಾರ್ಪಣಂ ‖

॥ ಶ್ರೀ ॥

॥ಯೋಗೇಶ್ವರೀ ತ್ವಾಂ ಶಿರಸಾ ನಮಾಮಿ॥

ಕ ರ್ಣಾ ಟ ಕ

ಸಂಪುಟ ೨
ಪಿಂಗಳ ಸಂ॥

# ನಂದಿನಿ.

ಸಂಚಿಕೆ ೧
ಆಶ್ವಿಜ

( ಮಾಸಪತ್ರಿಕೆ. )

ವಂದೇತ್ವಾಂ ಭೂದೇವಿ ಆರ್ಯಮಾತರಮ್ ।

" ಭಕ್ತ್ಯಾ ಗುರೌ ಮಯ್ಯನುಕಂಪಯಾ ಚ । ಪ್ರೀತಾಸ್ಮಿ ತೇ ಪುತ್ರ ವರಂ ವೃಣೀಷ್ವ
ನ ಕೇವಲಾನಾಂ ಪಯಸಾಂ ಪ್ರಸೂತಿ । ಮವೇಹಿಮಾಂ ಕಾಮದುಘಾಂ ಪ್ರಸನ್ನಾಂ ॥"

—ನಂದಿನಿ—(ರಘುವಂಶ)

ಅ. ಪೆ. ಸೇರಿ ವಾರ್ಷಿಕ ಚಂದಾ ೨-೮-೦

# ಸತೀಹಿತೈಷಿಣೀ ಗ್ರಂಥಮಾಲಾ

## ತ್ರೈಮಾಸಿಕ ಪುಸ್ತಕವು.

ಈ ಗ್ರಂಥಮಾಲೆಯಿಂದ ಸ್ತ್ರೀಜನಾಂಗಕ್ಕೆ ಎಷ್ಟು ಉಪಯೋಗವಾಗುತ್ತಿರು
ದನ್ನು ಇಲ್ಲಿ ವಿವರಿಸಬೇಕಾಗಿಲ್ಲ. ತಾವೇ ಪರೀಕ್ಷಿಸಿದರೆ ಗೊತ್ತಾಗುವುದು.
ಪ್ರಥಮ ಪುಸ್ತಕವು ಒಂದು ವರ್ಷದೊಳಗಾಗಿ ಎರಡಾವೃತ್ತಿ ಮುದ್ರಣವಾಗಿರು
ನೋಡಿದರೆಯೆ ಅದರ ಪ್ರಯೋಜನವು ತಿಳಿವುದು. ಇಷ್ಟರಲ್ಲಿ ದ್ವಿತೀಯ ಪ್ರ
ಪುನರ್ಮುದ್ರಣವಾಗುವುದರಲ್ಲಿದೆ. ಹೆಚ್ಚೇಕೆ, ಸ್ತ್ರೀಯರಮೇಲೆ ಬೀಳುತ್ತಿರು
ಪವಾದವನ್ನು ತಪ್ಪಿಸಿ, ಅವರಲ್ಲಿ ಗೌರವವನ್ನು ಹೆಚ್ಚಿಸುವುದರಿಂದ ದೇಶದ ಅ
ಯು ಹೇಗಾಗಬಹುದೆಂಬುದನ್ನು ಸಕಾರಣವಾಗಿ, ಸಮಯೋಚಿತವಾದ
ಲೇಖನಗಳಿಂದ ಅನೇಕ ವಿಚಾರಗಳನ್ನು ಪ್ರತಿಪಾದಿಸುವ ಗ್ರಂಥಗಳೇ ಇದರಲ್ಲಿ
ವಾಗುತ್ತಿರುವುವು. ಒಮ್ಮೆ ನೋಡಿದರೆ ಗುಣವು ತಾನಾಗಿ ಪ್ರಕಾಶಕ್ಕೆ ಬರುವು

### ಈ ವರೆಗೆ ಪ್ರಕಟವಾಗಿರುವ ಗ್ರಂಥಗಳು

| ಸಂಖ್ಯೆ | ಹೆಸರು | ಸಾಮಾನ್ಯ ಕ್ರಯ | ಚಂದಾ |
|---|---|---|---|
| ೧ | ಸುಶೀಲೆ | ೦- ೬-೦ | ೦- |
| ೨ | ನಭಾ | ೧- ೮-೦ | ೧- |
| ೩ | ವಿದ್ಯುಲ್ಲತಾ | ೦-೧೨-೦ | ೦-೧ |
| ೪ | ವಿರಾಗಿಣಿ | ೧- ೦-೦ | ೦-೧ |
| ೫ | ದಕ್ಷಕನ್ಯಾ | ೧- ೮-೦ | ೧- |
| ೬ | ಮಾತೃನಂದಿನಿ | ೧- ೪-೦ | ೧- |
| ೭ | ರಮಾನಂದ | ೦-೧೦.೦ | ೦- |
| ೮ | ವಿಕ್ರಮ | ೧- ೨-೦ | ೧-೧ |
| ೯ | ಚಂದ್ರವದನಾ | ೦-೧೦.೦ | ೦- |

ಭದ್ರಗೀತಾವಲಿ ೦-೪-೦; ವಿದ್ಯಾವಿಚಾರ, ಸೇವಾವಿಚಾರ, ೦-೧-೦, ಈ
ವರ್ಗಣಿದಾರರಿಗೆ ಬಹುಮಾನವಾಗಿ ಕೊಡಲ್ಪಡುವವು. ವಿಶೇಷ ವಿ
ಪತ್ರದ್ವಾರಾ.

ವಿಳಾಸ — ಕಾರ್ಯದರ್ಶಿ, ಹಿತೈಷಿಣೀ, ಮಾತೃಮಂದಿ
ವಂಜವಗೂಡು.

॥ ಶ್ರೀ ॥

वन्देत्वां भूदेवीं आर्यमातारम् ॥



ಕರ್ನಾಟಕ

# ನಂದಿನಿ

(ಮಾಸಪತ್ರಿಕೆ)



“ ಇದ್ಧಿಂ ಸರ್ವಾಣಿ ಭೂತಾನಿ ಭೂತಾನಾಂ ಚೈವ ಯಃ, ಪ್ರಭುಃ॥
ದಾಸ್ಯನ್ತಿ ಮಮಯೇ ಚಾನ್ಯೇ ಹ್ಯದೃಷ್ಟಾಃ ಪಥಿಗೋಚರಾಃ॥ ”

ಸಂಪುಟ ೨ { ಪಿಂಗಳ ಸಂ॥ ಆಶ್ವಯುಜ ೧೮೩೯—೧೯೧೭ ನವಂಬರ } ಸಂ. ೧

## ವಾಗ್ದೇವತಾಸ್ತುತಿ

ರಾಗ॥ ಹಿಂದುಸ್ತಾನಿ (ಬಟುವಾಯ್ಕಂದನ)

ಜಯಜಯ ಜನನೀ ಜಗದುಜ್ಜೀವಿನಿ, ಜಯಜಯ ಗೀರ್ವಾಣೀ ॥ಪಲ್ಲ॥
ಜಯಜಯ ಬ್ರಹ್ಮಾನಂದದಾಯಿನಿ, ಜಯ ಬ್ರಹ್ಮಾಣೀ ॥ ಅನು ॥
ಆವಳ ಕೃಪೆಯಿಂ ಜೀವಿಪೆವೊ ಮ—ತ್ತಾವಳ ವ್ಯಾಪನೆಯಿಂ ।
ದೈವಿಕಗುಣಸಂಭಾವಿತರಪ್ಪೆವೊ ಭಾವಿಪೆನಾ ದೇವಿಯನಾಂ ॥ ೧ ॥
ಉಡುವದು, ತೊಡುವುದು, ಕೊಡುವದು ಹಿಡಿವುದು—ನಡೆವುದದಾರಿಂದಂ ।
ನುಡಿವೆಸ್ಸನಿಸಿದಳಾವಳೊ—ನಾನವಳೆಡವಿಡದೆರೆವೆಂ ॥ ೨ ॥
ಮಾಯೆನಗರಿವಂ ಕಾಯಕೆ ಬಲಮಂ ಮಾಯೆಯ ಬಿಡಿಸಿನ್ನುಂ ।
ಕಾಯಜಪಿತ ಶೇಷಾದ್ರೀಶನ ನೆನೆವಾ ಸನ್ಮತಿಯೆಂದುಂ ॥ ೩ ॥

(ಮಹಾನವಮಿ) (ಪೂರ್ಣಕಲಾ)

ಶ್ರೀ

**ಶ್ರಿಯೈನಮಃ**

ಮಾತಸ್ಸಮಸ್ತ ಜಗತಾಂ ಮಧುಕೈಟಭಾರೇ
ರ್ವಕ್ಷೋ ವಿಹಾರಿಣಿ ಮನೋಹರ ದಿವ್ಯರೂಪೇ ||
ಶ್ರೀ ಸ್ವಾಮಿನಿ ಶ್ರಿತಜನ ಪ್ರಿಯದಾನ ಶೀಲೇ |
ಶ್ರೀ ವೇಂಕಟೇಶ ದಯಿತೇ ತವಸುಪ್ರಭಾತಮ್ ||"

# ಮಾತೃಸಮ್ಮುಖದಲ್ಲಿ

ಜನನಿ, ಚೈತನ್ಯಸ್ತನ್ಯದಾಯಿನಿ !!

ಆಶೀರ್ವದಿಸು,— ನಿನ್ನೀ ಅನಂತಸಂತಾನದಲ್ಲಿ ಅಣುಮಾತ್ರವಾದ ಈ ಕಂದನನ್ನು ಕೃಪಾಕಟಾಕ್ಷಗಳಿಂದ ನೋಡಿ ಅನುಗ್ರಹಿಸು.

ತಾಯಿ, ಅಂದು ನೀನು ಈ ಕಂದನನ್ನು ಎಚ್ಚರಿಸಿ ಕರೆತಂದು ಈ ಕರ್ಮಕ್ಷೇತ್ರದಲ್ಲಿ ನಿಲಿಸಿ, ಕರ್ತವ್ಯವನ್ನು ಬೋಧಿಸಿ, ಅಭಯವನ್ನು ದಯೆಪಾಲಿಸಿ, ಭರವಸೆಯನ್ನು ಹುಟ್ಟಿಸಿ, ಪ್ರವೃತ್ತಿಮಾರ್ಗದಲ್ಲಿ ನಡೆಯಲಾಣತಿಯಿತ್ತೆಯಲ್ಲವೆ? ಅಮ್ಮ! ಅಂದಿನ ನಿನ್ನ ಅಪ್ಪಣೆಯಂತೆ ಈ ನಿನ್ನ ಹಾಲುಕಂದನಾದ ನಂದಿನಿಯು ಇಂದಿನವರೆಗೆ ಒಂದು ವರ್ಷದ ತನ್ನ ಕೆಲಸವನ್ನು ಆವದೋ ಒಂದು ರೀತಿಯಿಂದ ನೆರವೇರಿಸಿದಳು. ಅದನ್ನೇ ನಿನ್ನ ಸಮ್ಮುಖದಲ್ಲಿ ಇಂದು ನಿವೇದಿಸುತ್ತಿರುವಳು. ಎಳೆಗುವರಿಯ ತೊದಲ್ನುಡಿಗಳನ್ನು ಒಲವಿಂದ ಕೇಳಿ, ಒಳಿತು-ಕೆಟ್ಟುದುದೆಂಬದನ್ನು ತಿಳಿಯಹೇಳುವಿಯೆಂದು ನಂಬಿರುವೆನು.

ಜನನಿ!— "ಈ ನಿನ್ನನಂದನೆ, ವಿದುಷೆಯಲ್ಲ; ಲೋಕಾನುಭವ ಪಾಂಡಿತ್ಯವು ಇವಳಲ್ಲಿ ಅಷ್ಟಿಷ್ಟಾದರೂ ಇಲ್ಲ; ಅಲ್ಲದೆ ಬಹು ಭಾಷಾ ಪರಿಶ್ರಮದ ಸುಡಿಯಾದರೂ ಇವಳಲ್ಲಿ ತೋರುತ್ತಿಲ್ಲ. ಹೀಗಿರುವ ಕೇವಲ ಅಲ್ಪಮತಿಯಾದ ಕುವರಿಯಿಂದ ಆವ ಮಹತ್ಕಾರ್ಯಗಳಾದಾವೆಂದು ಹಿಂದೆಯೇ ನಿವೇದಿಸಿದ್ದೆನು; ಆದರೂ ಅದಕ್ಕುತ್ತರವಾಗಿ ನೀನು ನನ್ನನ್ನು ಕುರಿತು, "ಹಂದೆತನವು ಸಾಕು. ವಿಚಾರಮಾಡು, ಕಾರ್ಯದಲ್ಲಿ ಕೈನೀಡು, ನಮ್ಮ ಮಾತಿನಲ್ಲಿ ಭರವಸೆಯನ್ನಿಡು,; ಧೈರ್ಯವೆಂಬ

ಅಭೇದ್ಯಕವಚವಿದನ್ನು ಕೊಡುವೆನು-ತೊಡು, ಈ ಕಾರ್ಯದಲ್ಲಿ ಕೃತಾರ್ಥಳಾಗದೆ ಬಿಡೆನೆಂದೇ ಪಂಥಮಾಡು..........." ಎಂದೀ ಬಗೆಯಾಗಿ ಹೇಳಿ, ಕಂದನನ್ನು ಹುರಿಗೊಳಿಸಿ ಕರ್ತವ್ಯ ಚಕ್ರದಲ್ಲಿ ಸೇರಿಸಿ ತಿರುಗಿಸಿಬಿಟ್ಟೆ. ಆದುದಾಗಲೆಂದು ನಾನೂ ಮುಂದಕ್ಕಡಿಯಿಟ್ಟು ನಡೆದೆನು. ಎಡವಿ ಬೀಳುವ ಸಂಭವವುಂಟಾದರೂ ನೀನೇ ಕೈಹಿಡಿದೆತ್ತಿ ಸುಸ್ಥಳದಲ್ಲಿ ನಿಲ್ಲಿಸುವೆಯೆಂಬ ನಂಬಿಗೆಯುಳ್ಳವಳಾಗಿಯೇ ಇರುವೆನು.

ಅಮ್ಮಾ! ನೋಡು, ಇದು ನಿನ್ನ ಮಹಿಮೆಯೇ ಅಲ್ಲವೆ?— ಒಂದನ್ನೂ ತಿಳಿಯದ ಮಂದಮತಿಯೆಂದಿದ್ದ ಈ ನಿನ್ನ ನಂದನೆಗೆ ಬುದ್ಧಿಗಲಿಸಲು ನಿನ್ನ ಮಕ್ಕಳಲ್ಲಿ ಎಷ್ಟುಮಂದಿ ಬದ್ಧ ಕಂಕಣರಾಗಿ ನಿಂದಿರುವರು ನೋಡು—ನೋಡು! ಅಪ್ರಾರ್ಥಿತರಾಗಿಯೋ-ಸ್ವಸಂತೋಷಕ್ಕಾಗಿಯೋ,- ಅಥವಾ ಪರಾರ್ಥವಾಗಿಯೋ-ಇಲ್ಲವೆ-ನಿನ್ನ ಪ್ರೇರಣೆಯಿಂದಲೋ-ಹೇಗೂ ನಮ್ಮ ಆರ್ಯ ಬಾಂಧವರಲ್ಲಿ ಪರಿಗಣಿತರಾಗಿರುವವರಲ್ಲಿ ಅನೇಕರು ನಿನ್ನೀ ನಂದನೆಗೆ ಬೋಧಕ-ಶಿಕ್ಷಕ, ನಿವೇದಕರುಗಳಾಗಿ ನಿಂತು ಶ್ರಮಪಡುತ್ತಿರುವರೆಂತೆಂಬದನ್ನು ಸ್ವಲ್ಪವಾದರೂ ಕಟಾಕ್ಷಿಸಬಾರದೇ-ಅಮ್ಮಾ:—

ಸಾಕು, ಅಮ್ಮಾ! ಇಷ್ಟುಮಂದಿ ವಿದ್ವನ್ಮಣಿಗಳಾದ-ವಿದುಷೀಮಣಿಯರಾದ ಬಂಧು ಭಗಿನಿಯರೂ ಕೃತಸಂಕಲ್ಪರಾಗಿ ನಿಂದು ನಡೆದಾಡುತ್ತಿರಲು ನಂದಿನಿಗೆ ಕುಂದೆಲ್ಲಿರುವುದು? ನಿಜವಾಗಿಯೋ ಕೃತಕವಾಗಿಯೋ,-ಹೇಗಾದರೂ ಇರಲಿ, ಅವರೆಲ್ಲರೂ ಭಟ್ಟಾರಕ-ವೈತಾಳಿಕ-ಸ್ತುತಿಪಾಠಕರಾಗಿ ಮೆರೆಯುತ್ತಿರುವುದನ್ನು ನೋಡಿ, ಮತ್ತವರ ಸ್ತುತಿಪಾಠಗಳಿಗೆ ಪ್ರತ್ಯೂಹವನ್ನು ತಂದೊಡ್ಡಿ ಅವರನ್ನು ಭಂಗಗೊಳಿಸುವ ಪ್ರಯತ್ನದಲ್ಲಿ ನಿಂದಕ-ದೂಷಕರೆಂಬ ಬಿರುದನ್ನು ತಳೆದು ಬಗೆಬಗೆಯಾಗಿ ಬಗೆದು ಬೀಗುತ್ತಿರುವ ಬಂಧುಗಳನ್ನು ಕಂಡು,—ತಿಳಿದುಕೊಂಡರೆ ಸಾಲದೆ?- ಹೋಗಲಿ, ಆ ವಿಚಾರದಲ್ಲಿ ಹೆಚ್ಚಾಗಿ ಹೇಳಿ ನ್ನಿಸನ್ನು ಬೇಸರಿಸಲಾರೆನು.

ಇದೊ, ಅಮ್ಮ:— ನಿನ್ನ ನಂದನೆ, ಈ ಒಂದು ವರ್ಷದಲ್ಲಿ ಮಾಡಿರುವ ಕೆಲಸವೆಂದರೆ ಇಷ್ಟು,—

ತಕ್ಕಮಟ್ಟಿಗೆ-ಎಂದರೆ "ಅಳಲಭಕ್ತಿ-ಮಳಲಸೇವೆ" ಎಂಬಂತೆ ತನ್ನ ಎಳವಯಸ್ಸಿಗೆ, ತಕ್ಕಂತೆ ಭಗವನ್ನಾಮಕೀರ್ತನೆಗಳನ್ನೂ "ದೀಪಾವಳಿಯಸುಗ್ಗಿ"ಯೇ ಮೊದಲಾದ ಉತ್ಸಾಹಗೀತೆಗಳನ್ನೂ "ಆಳ್ವಾರರವೈಭವ"ವೆಂಬ ಸಾಧುಚರಿತದ ಪೂರ್ವಭಾಗವನ್ನೂ ಪ್ರಕಾಶಪಡಿಸಿರುವಳು. ಸೋದರಿಯರ ಅಭ್ಯುದಯಕ್ಕೆ ಹೆಚ್ಚು ಉಪಯೋಗಕರವಾಗಿರುವ "ಸ್ತ್ರೀಯರ ನೈಸರ್ಗಿಕಸೇವೆ," "ಭಾರತ ಮಹಿಳಾಸಮಾಜ," "ಬಡತನ" "ದೇಶೋನ್ನತಿ" ಮುಂತಾದ ಇತರ ಲೇಖಗಳನ್ನೂ ಅಡಿಗಡಿಗೆ ಸ್ವತಂತ್ರವಾದ ಅಭಿಪ್ರಾಯದ ಉತ್ತಮ ವಿಚಾರಪರವಾದ ಉಪನ್ಯಾಸಗಳನ್ನೂ, ಕನ್ನಡ ರನ್ನಗನ್ನಡಿಯಲ್ಲಿ ೫ ಮಣಿಗಳಾಗಿ ಅಯ್ವರು ದೇಶಭಕ್ತರ ಚರಿತೆಗಳನ್ನೂ ಪ್ರತ್ಯೇಕವಾಗಿ ಇಬ್ಬರು ದೇಶಭಕ್ತರ ಆರ್ಯರಮಣಿಯರ ಚರಿತೆಗಳನ್ನೂ ಮತ್ತು ಇತರ ಚರಿತ್ರಾರ್ಹರಾದ ಮಹಿಳೆಯರ ಪವಿತ್ರ ಜೀವಿತಗಳನ್ನೂ ಸಚಿತ್ರವಾಗಿ ಪ್ರಕಟಿಸಿರುವಳು. ದೈವ-ಗುರು ಭಕ್ತಿಯನ್ನು ಹೆಚ್ಚಿಸುವ ಲೇಖನ—ಕೀರ್ತನಗಳನ್ನೂ ಪ್ರಕಾಶಪಡಿಸಿರುವಳು. ಒಟ್ಟಿನಲ್ಲಿ, ತನ್ನ ವರ್ಗಣೀದಾರರ ಉಪಯೋಗಕ್ಕೆಂದು -ತಾನು ಮೊದಲು ಉದ್ದೇಶಿಸಿದ್ದರೂ-ಅದರಿಂದ ಬಹು ಧನವ್ಯಯ ವಾಗುವುದೆಂದು ತಿಳಿದಿದ್ದರೂ-ಹಿಂತೆಗೆಯದೆ ಸ್ವತಂತ್ರವಾದ ವೆಚ್ಚದಿಂದಲೇ-೧೪ ಭಾವಚಿತ್ರಗಳನ್ನೂ ಬಂಧುವರ್ಗೀಯರ ಸಹಾಯದಿಂದ ಪಡೆದ ೪ಚಿತ್ರಗಳನ್ನೂ ಪ್ರಕಟಪಡಿಸಿರುವಳು. ಈ ವರೆಗೆ ನಂದಿನಿ, ನಿರ್ವಹಿಸಿರುವ ಕಾರ್ಯಗಳನ್ನೂ, ಅವುಗಳಿಗಾಗಿ ಮುಟ್ಟಿರುವ ವೆಚ್ಚವನ್ನೂ ಒಟ್ಟು ಕೂಡಿಸಿ, ಅವಳಿಗೆ ಈ ವರೆಗೆ ಬಂದಿರುವ ಹಣವನ್ನು ಗುಣಿಸಿ ನೋಡುವುದಾದರೆ—ಕೇವಲ ಭಾವಚಿತ್ರಪ್ರಕಟನೆ-ಕಾಗದಗಳ ಖರ್ಚು-ಇವೆರಡಕ್ಕೂ ಸರಿಯಾಗಿ ಸಾಲದಂತಿದೆಯಾದರೂ, ಸತೀಹಿತೈಷಿಣಿಯ ಬಲದಿಂದಲೂ ನಿನ್ನ ಅನುಗ್ರಹದಿಂದಲೂ ಈ ನಂದಿನಿ, ಹೇಗೋ ಸೇವೆಯನ್ನು ನಿರ್ವಹಿಸಿಯೇ ನಿರ್ವಹಿಸುವಳು.

ಅಮ್ಮ! ಮೊದಲೇ ಹೇಳಿದೆನಲ್ಲವೆ?— ನಂದಿನಿ, ಇನ್ನೂ ಎಳೆಗುವರಿಯೆಂದು! ಎಷ್ಟಾದರೂ ಮಕ್ಕಳು ಎಷ್ಟುತಪ್ಪಿದರೂ,-ತಾಯಿಯಾದವಳು ಅದೆಲ್ಲವನ್ನೂ ಮನ್ನಿಸಿ, ಅವರನ್ನು ಆದರಿಸುವದು ಸಹಜವಷ್ಟೆ. ನೀನು ಕೂಡ ನಿನ್ನ ಮಗುವಾದೀ ನಂದಿನಿ, ನಿನ್ನ ಮಾತನ್ನು ಮೀರಿ ಎಲ್ಲಿಯಾದರೂ ಅಹಂ ಭಾವದಿಂದ ನಡೆದಿದ್ದರೂ, ನಿನ್ನದಯೆಗೆ ಪಾತ್ರಳಾಗಿರುವೆನೆಂಬ ಹೆಚ್ಚುಗೆಯಿಂದ ಎಲ್ಲಿಯಾದರೂ ಹೆಮ್ಮೆಯಿಂದ ನಡೆದಿದ್ದರೂ ಮತ್ತೆ ತನ್ನ ಕರ್ತವ್ಯಕ್ಕೆ ಲೋಪವುಂಟಾಗುವದೆಂಬ ಕಾರಣದಿಂದೇನಾದರೂ ಬಂಧುವರ್ಗದಲ್ಲಿ ಶಠತೆಯನ್ನು ವಹಿಸಿದ್ದರೂ, ಒಟ್ಟಿನಲ್ಲಿ ಈ ಒಂದು ವರ್ಷದಲ್ಲಿ ಅರಿತೋ,— ಅರಿಯದೆಯೊ ಮಾಡಿರಬಹುದಾದ ಅನಂತಾಪರಾಧಗಳನ್ನೂ ಕ್ಷಮಿಸಿ ಪುತ್ರಿವಾತ್ಸಲ್ಯದಿಂದ ಕೈಹಿಡಿದು ಕಾಪಾಡುವೆಯಲ್ಲವೆ?

ತಾಯಿ, ನೋಡು; ಇಂದಿಗೆ ಒಂದುವರ್ಷವು ಪೂರ್ಣವಾಯಿತು. ನಾಳೆಯೇ ವಿಜಯ ದಶಮಿ, ನಾಳೆಯೇ ಇವಳು. ದ್ವಿತೀಯ ವರ್ಷದಲ್ಲಿ ಪದವನ್ನಿಡಬೇಕಾಗಿದೆ. ಆದುದರಿಂದ ಇದೋ,—ಇದೋ ತಾಯಿಯಲ್ಲಿ ಅಡಿಗಡಿಗೂ ಅಡ್ಡಬಿದ್ದು ಬೇಡಿಕೊಳ್ಳುತ್ತಿರುವಳು. ಈ ಹಿಂದಿನ ವರ್ಷದಲ್ಲಿ ತನಗೆ ಉಂಟಾಗಿದ್ದ ಜಡರೋಗವಾಗಲಿ,- ಇತರ ಆಪತ್ತುಗಳಾಗಲಿ-ಇನ್ನುಮುಂದೆ ಉಂಟಾಗದಂತಿದ್ದು, ಮೊದಲ ವರ್ಷದಲ್ಲಿ ಮಾಡದೆ ಬಿಟ್ಟಿರುವ ಸೇವೆಯನ್ನು ಈ ವರ್ಷವಾದರೂ ತೃಪ್ತಿಕರವಾಗಿ ನೆರವೇರಿಸಿ, ಕೃತಕೃತ್ಯಳಾಗುವಂತಾಗಲೆಂದು ಆಶಿರ್ವದಿಸು, ಅಮ್ಮ! ಕಟಾಕ್ಷಿಸು; ನಾಳೆಯೇ ವಿಜಯದಶಮಿಯ ವಾರ್ಷಿಕೋತ್ಸವದ ಸಮಾರಂಭವನ್ನು ಸಾಂಗಗೊಳಿಸುವುದರಿಂದ ಸುಹೃದಯರಾದ ಆರ್ಯಬಂಧುಭಗಿನಿಯರ ಆಶಿರ್ವಾದಗಳನ್ನು ಸಂಪಾದಿಸುವೆನೆಂದು ಭಾವಿಸಿ, ದ್ವಿತೀಯ ವರ್ಷದ ಸುಖಾಗಮನವನ್ನು ಬಯಸಿ, ಜಗಜ್ಜನನಿಯಾದ ನಿನ್ನ ಅನುಗ್ರಹದಿಂದ ಜಗತ್ತಿಗೇ ಕಲ್ಯಾಣವುಂಟಾಗಲೆಂದು ಪ್ರಾರ್ಥಿಸುತ್ತ ಇದೋ-ನಿನ್ನ ಒಂದುವರ್ಷದ ಸೇವಾಕಾರ್ಯದ ಸಮಸ್ತ ವಿಚಾರವನ್ನು ನಿನ್ನ ಪಾದಾರವಿಂದದಲ್ಲಿ ಸಮರ್ಪಿಸಿರುವೆನು.

ಇಂತು ನಿವೇದಿಸುವ ನಿನ್ನ ನಂದಿನಿ—

ಶ್ರೀ



ಉಲ್ಲಾಸ ಪಲ್ಲವಿತ ಪಾಲಿತ ಸಪ್ತಲೋಕೀ।
ನಿರ್ವಾಹ ಕೋರಕಿತ ನೇಮ ಕಟಾಕ್ಷಲೀಲಾಮ್॥
ಶ್ರೀರಂಗ ಹರ್ಮ್ಯತಲ ಮಂಗಲ ದೀಪರೇಖಾಮ್।
ಶ್ರೀರಂಗ ರಾಜ ಮಹಿಷೀಂ ಶ್ರಿಯಮಾಶ್ರಯಾಮಃ॥

ಮಾತೃಮಂದಿರಂ

(ನಂದಿನಿಯು)

# ವಾರ್ಷಿಕ ಮಹೋತ್ಸವವು



೧೦—೧೧ನೆ ಸಂಚಿಕೆಗಳಲ್ಲಿ ನಿವೇದಿಸಿದ್ದಂತೆ ನಂದಿನಿಯ ವಾರ್ಷಿಕ ಮಹೋತ್ಸವವು ವಿಜಯದಶಮಿಯಲ್ಲಿಯೇ ನಡೆಯುವಂತೆ ನಿಶ್ಚಯಿಸಿದ್ದರೂ ಕೆಲವು ಅನಿವಾರ್ಯಗಳಿಂದ ವಿಜಯದಶಮಿಯಲ್ಲಿ ಅಷ್ಟು ಸಂಭ್ರಮವಾಗಿ ನಡಿಯಿಸುವದಾಗಲಿಲ್ಲ. ಆದರೂ ಅಂದು ಮಾತೃಮಂದಿರದಲ್ಲಿ ಸೂಕ್ಷ್ಮವಾಗಿಯಾದರೂ ಉತ್ಸವಕಾರ್ಯವನ್ನು ನಡೆಯಿಸಬೇಕೆಂಬ ಭಾವನೆಯಿಂದ,-ನಂದಿನಿ-ಹಿತೈಷಿಣಿಯರ ಮತ್ತು ಮಾತೃಮಂದಿರದ ಅಭ್ಯುದಯೇಚ್ಛುಗಳಾದವರಲ್ಲಿ ಕೆಲವರನ್ನುಮಾತ್ರ ಕರೆಯಿಸಿಕೊಂಡು, ಮಂದಿರದ ವಿದ್ಯಾರ್ಥಿಗಳ ಮೂಲಕ ಉತ್ಸವಕಾರ್ಯವನ್ನು ಗುರುಜನರ ಆಜ್ಞಾನುಸಾರ ಭಗವದ್ಗುಣಕಥನ-ಶ್ರೀ-ಶಾರದಾ-ಪ್ರಾರ್ಥನಾ ಪೂರ್ವಕವಾಗಿ ನೆರವೇರಿಸಿತು. ಈ ಉತ್ಸವದಲ್ಲಿಯೇ ನಂದಿನಿಯು ವಿಜಯದಶಮಿಯ ಸುಮುಹೂರ್ತದಲ್ಲಿ ಪ್ರಕಾಶಕ್ಕೆ ಬಂದುದರ ಸತ್ಫಲವೆಂಬಂತೆ ಈಗ ಉಂಟಾಗಿ-ಆಗುತ್ತಿರುವ ಸರ್ವತೋಮುಖವಾದ ಅಭಿನಂದನಗಳನ್ನು ನೋಡಿ ಹೊಸ ಹುರುಪಿಂದ ಇಂದಿನ ಸು

ಮುಹೂರ್ತದಲ್ಲಿ ಮಂದಿರವು ನಮ್ಮ ವಿದ್ಯಾರ್ಥಿವರ್ಗಕ್ಕೆ ಉತ್ತರೋತ್ತರಾಭಿವೃದ್ಧಿದಾಯಕವಾದ ಕಾರ್ಯವನ್ನು ಕೈಕೊಳ್ಳಬೇಕೆಂದು ಯೋಚಿಸಿ, ಮಂದಿರದಲ್ಲಿ ವಿದ್ಯಾರ್ಥಿಗಳ(ಚರ್ಚಾ)ಸಂಘವೊಂದನ್ನೂ ಈ ಸಂಘದ ಉಪಯೋಗಕ್ಕಾಗಿ ಒಂದು ಪುಸ್ತಕ ಭಂಡಾರ(ಮಾತೃಮಂದಿರಂ-ಸರಸ್ವತೀ ಭಂಡಾರ.)ವನ್ನೂ ಒಂದು ವಾಚನಶಾಲೆಯನ್ನೂ ಏರ್ಪಡಿಸಿದುದಲ್ಲದೆ, ದೃಶ್ಯಕಾವ್ಯಗಳ ಪ್ರಯೋಜನವನ್ನು ಹೊಂದಲು ತಕ್ಕಂತೆ "ಶ್ರೀ-ಲಕ್ಷ್ಮೀವಿಲಾಸ ಬಾಲಕರ್ಣಾಟನಾಟಕಸಂಘ" ಎಂಬ ಅಭಿಧಾನದಿಂದ ವಿದ್ಯಾರ್ಥಿಗಳ ನಾಟಕಸಂಘವೊಂದನ್ನೂ ಏರ್ಪಡಿಸಿತು. *

ಭಗವತಿಯ ಅನುಗ್ರಹದ ಬಲದಿಂಧ ನಂದಿನಿಯ ವಾರ್ಷಿಕ ಮಹೋತ್ಸವವು ಆಶ್ವಯುಜ ಶುದ್ಧ ಪೂರ್ಣಿಮಾ ಮಂಗಳವಾರ (೩೦-೧೦—೧೯೧೭) ಸಂರಂಭದಿಂದ ನೆರವೇರಿತು. ಉತ್ಸವಕ್ಕಾಗಿ ಸ್ಥಳೀಯರಿಗೂ—ಪರಸ್ಥಳೀಯರಿಗೂ ಬಹುಮಂದಿಗೆ ಆಹ್ವಾನಪತ್ರಗಳು ಹೋಗಿದ್ದವು. ಮಾತೃಮಂದಿರದಲ್ಲಿ ಸ್ಥಳಾಭಾವವಾಗಿರುವುದರಿಂದ ಉತ್ಸವಕ್ಕಾಗಿ ಘನತೆಹೊಂದಿದ ನಮ್ಮ ವಿದ್ಯಾಂಗದವರ ಅನುಮತಿಯನ್ನು ಪಡೆದು ಇಲ್ಲಿಯ ಹೈಸ್ಕೂಲ್ ಹಾಲನ್ನು ಬಿಡಿಸಿಕೊಂಡು ಅಲ್ಲಿ ಉತ್ಸವವನ್ನು ನಡೆಯಿಸಿತು.

ಅಂದು ನಂದಿನಿ-ಹಿತೈಷಿಣಿಯರ ಅಭ್ಯುದಯವನ್ನು ಕೋರಿ, ಮಾತೃಮಂದಿರದಲ್ಲಿ ಭಗವದಾರಾಧನೆ-ಭಜನೆ-ಗಳು ನಡೆದು ರಾತ್ರಿ ಎಂಟುವರೆಯಿಂದ ಉತ್ಸವಕ್ಕೆ ಮೊದಲು ಮಾಡಿತು. ಸ್ಥಳಾಂತರದಿಂದ ಕೇವಲ ಆಪ್ತವರ್ಗೀಯರಾದ ಬಂಧು ಭಗಿನಿಯರು ಬಂದಿದ್ದರು. ಸ್ಥಳೀಯ ಬಂಧು ಭಗಿನಿಯರಲ್ಲಿ ಬಹುಜನರು ಉತ್ಸವೋತ್ಸುಕರಾಗಿ

* ಈ ಮೇಲಿನ ವಿದ್ಯಾರ್ಥಿಗಳ ಸಂಘ-ಪುಸ್ತಕಭಂಡಾರ-ಇವುಗಳು ಅಭಿವೃದ್ಧಿಗೇರುವುದೆಂಬುದರ-ಶುಭಚಿಹ್ನೆಯಾಗಿ ದಿನವೂ ಹೊಸ ವಿದ್ಯಾರ್ಥಿಗಳು ಸಂಘಕ್ಕೆ ಸೇರುತ್ತಲಿರುವರೆಂದು ತಿಳಿಸಲು ಸಂತೋಷವಾಗುತ್ತದೆ.

ಸಂ. ನಂ.

ಬಂದು ಸಭೆಯನ್ನು ಶೋಭಾಯಮಾನವಾಗಿ ಮಾಡಿದ್ದರೂ ಇಲ್ಲಿಯ ಸಬ್ ಡಿವಿಜನ್ ಆಫೀಸರ್ ಶ್ರೀಯುತ ಎ. ಕೃಷ್ಣಸ್ವಾಮಯ್ಯಂಗಾರ್ರವರು ಅಗ್ರಾಸನವನ್ನಲಂಕರಿಸಲು ಉದಾರ ಬುದ್ಧಿಯಿಂದ ಸಮ್ಮತಿಸಿ, ರಾತ್ರಿ ೮॥ವರೆಗೆ ದಯಮಾಡಿಸಿದರು. ಅಧ್ಯಕ್ಷರು ಬಂದೊಡನೆ ಶ್ರೀ-ಶಾರದಾ ಪ್ರಾರ್ಥನಾಪೂರ್ವಕವಾಗಿ ಸ್ವಾಗತ ಗೀತೆಯನ್ನು ಹಾಡಿದ ಬಳಿಕ ಅಧ್ಯಕ್ಷರಿಗೂ-ಸಭಿಕರಿಗೂ ಸ್ವಾಗತವನ್ನೊಪ್ಪಿಸಿ-ಮಂದಿರದ ಸಂಕ್ಷಿಪ್ತವೃತ್ತವನ್ನು ನಿವೇದಿಸಿತು.

ವರದಿಯು ಒಪ್ಪಿಸಲ್ಪಟ್ಟಮೇಲೆ ವಿದ್ಯಾರ್ಥಿಗಳಲ್ಲೊಬ್ಬನಾದ ಜಿ. ಎಸ್. ನಾರಾಯಣ ನೆಂಬಾತನು "Mother India, Thou art Unhappy" ಎಂಬ ಉಪನ್ಯಾಸವನ್ನು ಆಂಗ್ಲಭಾಷೆಯಲ್ಲಿ ಓದಿದನು. ಆ ಬಳಿಕ ಸಭಿಕರ ಉತ್ಸಾಹಕ್ಕಾಗಿ ಮಂದಿರದ ವಿದ್ಯಾರ್ಥಿಗಳಿಂದ "ರಮಾನಂದ ನಾಟಕ"ವು ಅಭಿನಯಿಸಲ್ಪಟ್ಟಿತು.

ನಾಟಕಾರಂಭವಾದ ಬಳಿಕ ಅಧ್ಯಕ್ಷರು ಸ್ವಂತ ಅನಿವಾರ್ಯದಿಂದ ನಿಲ್ಲಲವಕಾಶವಿಲ್ಲವೆಂದು ಸೂಚಿಸಿ ತೆರಳಿದರು. ನಾಟಕಾಭಿನಯವನ್ನು ರಾತ್ರಿ ೧೨ಕ್ಕೆ ಮುಗಿಸಿ, ಆ ಬಳಿಕ ಶಾರದಾ ಸ್ತುತಿ-ಗೀತೆಗಳನ್ನೂ ಮಂಗಳವನ್ನೂ ನಡೆಯಿಸಿದರು.

ಈ ಸಂದರ್ಭದಲ್ಲಿ ಸಂಪಾದಿಕೆಯ ತೀರ್ಥಪಾದರು ಸಭಿಕರಿಗೆಲ್ಲ ಕೃತಜ್ಞತಾ ವಂದನೆಗಳನ್ನೊಪ್ಪಿಸಿದರು; ಅದಕ್ಕುತ್ತರವಾಗಿ, ಸಂಪಾದಿಕೆಯ ಸುಹೃದ್ಭ್ರಾತೃಗಳಲ್ಲಿ ಮುಖ್ಯರಾದ ದೇಶಭಕ್ತರೊಬ್ಬರು ವಿದ್ಯಾರ್ಥಿಗಳಿಗೂ—ಮಂದಿರವಾಸಿಗಳಿಗೂ ಸಭಿಕರಿಗೂ ಸಹ ಅತ್ಯುಪಯುಕ್ತವೂ ಅವಶ್ಯಕವೂ ಆದ ಸ್ವಾರಸ್ಯವಾದ ಭಾಷಣ ಮಾಡಿದರು. ಆ ಬಳಿಕ, ನಂದಿನಿಯ ಮುದ್ರಾಪಕರೂ, ಹಿತೈಷಿಣಿಯ-ಅಭ್ಯುದಯೇಚ್ಛುಗಳೂ, ಸಂಪಾದಿಕೆಯ ಸುಹೃದ್ಭ್ರಾತೃವರ್ಯರೂ ಆದ ಶ್ರೀಯುತ ಬಿಂದುರಾಯರು, ಅತ್ಯುತ್ತಮವೆನಿಸಿದ ಅನೇಕ ವಿಚಾರಗಳೊಳಕೊಂಡ ಭಾಷಣವನ್ನು ಸಭಿಕರ ಮನಸ್ಸಿಗೆ ಚನ್ನಾಗಿ ಹಿಡಿಯುವಂತೆ ಉತ್ತಮ ರೀತಿಯಿಂದ ನಡೆಯಿಸಿದರು. ಆ ಮೇಲೆ ಸ್ಥಳೀಯ ಬಂಧುಗಳಲ್ಲಿ ಗಣ್ಯರಾದ ಇಬ್ಬರು ಭ್ರಾತೃವರ್ಗೀಯರ ಕಾಲೋಚಿತ ಭಾಷಣಗಳು ನಡೆ

ದವು. ಆದಾದ ಬಳಿಕ, ಸಂಪಾದಿಕೆಯು ತೀರ್ಥಪಾದರು ಆತ್ಮವಿಚಾರಪರವಾದ ಭಾಷಣವನ್ನು ಬೆಳಸಿ, ಸಭಿಕರನ್ನು ಮತ್ತೆ ವಂದಿಸಿದರು. (ಇಷ್ಟರಲ್ಲಿ ಸಭಿಕರಿಗೆಲ್ಲ ಪುಷ್ಪ ತಾಂಬೂಲ-ಸಕ್ಕರೆ ವಿನಿಯೋಗಗಳಾಗಿದ್ದುವು) ಅನಂತರ ವಿದ್ಯಾರ್ಥಿಸಂಘದವರೂ ಸಭಿಕರೂ ಸೇರಿ-ಸಾರ್ವಭೌಮ ಸರ್ಕಾರಕ್ಕೂ-ನಮ್ಮ ಪ್ರಭುವರೇಣ್ಯರಾದ ಶ್ರೀಮನ್ಮಹಾರಾಜರಿಗೂ ಮತ್ತು ರಾಜಪರಿವಾರದವರಿಗೂ ಜಯವನ್ನೂ ಆರೋಗ್ಯಭಾಗ್ಯವನ್ನೂ ಪ್ರಾರ್ಥಿಸಿದರು. ಸಭಿಕರೆಲ್ಲರ ಕರತಾಡನ-ವಿದ್ಯಾರ್ಥಿವರ್ಗೀಯರ ಭಕ್ತಿಗೀತೆ, ವಾದ್ಯಗಳ ಘೋಷಣಗಳಿಂದ ರಾತ್ರಿ ಎರಡು ಘಂಟೆಯ ಸಮಯಕ್ಕೆ ಉತ್ಸವವು ಸಾಂಗವೆನ್ನಿಸಿತು.

ನಂದಿನಿಯ ಮೂಲಕ ಈ ವರೆಗೆ ನಡೆದಿರುವ ೧ ಯಾತ್ರಾದಾನ ಮಹೋತ್ಸವ, ೨ ಷಾಣ್ಮಾಸಿಕೋತ್ಸವದ ಶಾರದಾ ಪೂಜಾ ಸಮಾರಂಭ, ೩ ವಾರ್ಷಿಕ ಮಹೋತ್ಸವ ಈ ಮೂರು ಉತ್ಸವಗಳಲ್ಲಿಯೂ ಮಹನೀಯರಾದ ನಮ್ಮ ಬಂಧು ಭಗಿನಿಯರ ಸಂದರ್ಶನ-ತನ್ಮೂಲಕ ಅವರ ಪವಿತ್ರಸಂದೇಶಗಳ ಅಲಭ್ಯಲಾಭವನ್ನು ಹೊಂದಿದಂತೆಯೇ ಮುಂದೆಯೂ, ಆಡಿಗಡಿಗೆ, ಮಹನೀಯರ ಸಂದರ್ಶನ-ಸಂಭಾಷಣಗಳು ಲಭಿಸುತ್ತಿರುವಂತೆ ದಯಾಮಯನಾದ ಭಗವಂತನು ಅನುಗ್ರಹಿಸಲೆಂದೂ, ಪುತ್ರವತ್ಸಲೆಯಾದ ನಮ್ಮ ಮಾತಾದೇವಿಯು ನಮ್ಮೆಲ್ಲರನ್ನು ಬೆಂಬಿಡದೆ ಸಲಹುತ್ತಿರಲೆಂದೂ ಪ್ರಾರ್ಥಿಸಿ, ನಮ್ಮಲ್ಲಿ ವಿಶೇಷವಾಗಿ ಪುತ್ರವಾತ್ಸಲ್ಯವನ್ನು ಪ್ರದರ್ಶಿಸುತ್ತಿರುವ ನಮ್ಮ ಪ್ರಭುವರೇಣ್ಯರ ಮತ್ತು ವಿದ್ಯಾಂಗದ ಅಧ್ಯಕ್ಷರ ನಿಸರ್ಗವಾತ್ಸಲ್ಯವನ್ನು ಸಂಸ್ಮರಿಸುತ್ತ, ಮುಂದೆ ತಿಂಗಳೊಂದೆರಡರಲ್ಲಿ ನಡೆಯುವುದರಲ್ಲಿರುವ ನಂದಿನಿಯ ದ್ವಿತೀಯ ವರ್ಷಾರಂಭ ಮಹೋತ್ಸವದ ವೇಳೆಗೆ ಈ ಲೇಖಿನಿಯನ್ನು ಸಜ್ಜುಗೊಳಿಸಲು ಇದೊ-ಇದೊ ಬೀಳ್ಕೊಳ್ಳುತ್ತಿರುವೆವು.

ಇತಿ-(ಕಾರ್ಯ ನಿರ್ವಾಹಕರು)

---

(ವಾರ್ಷಿಕೋತ್ಸವದಲ್ಲಿ ಒಪ್ಪಿಸಿದ)

# ಸ್ವಾಗತಾಭಿವಂದನವು



ವಂದನೀಯರಾದ ಗುರುಜನರೇ! ಪೂಜ್ಯರಾದ ಆರ್ಯಮಾತೆಯರೇ!! ವಿಶ್ವಸನೀಯರಾದ ಬಾಲ—ಬಾಲೆಯರೇ!!!

ನಿಮ್ಮೆಲ್ಲರಿಗೂ ಸುಖಾಗಮನವನ್ನು ಕೋರುವೆವು.

ನಿರ್ದುಷ್ಟ ಪ್ರೇಮದಿಂದ ಇಲ್ಲಿಯವರೆಗೆ ಚಿತ್ತೈಸಿ ನಮ್ಮ ಇಂದಿನ ಉತ್ಸವಕಾರ್ಯದಲ್ಲಿ ಪ್ರೋತ್ಸಾಹಕರಾಗಿ ನಿಂತು ಪ್ರಕಾಶಿಸಲು ಅನುಗ್ರಹಿಸಿ ಶ್ರಮವನ್ನೂ ಗಣಿಸದೆ ದಯೆಮಾಡಿಸಿದುದಕ್ಕಾಗಿ ಮಾತೃಮಂದಿರದವರ ಪರವಾಗಿ ವಂದನೆಗಳು.

ನಮ್ಮ ಪೂಜ್ಯ ಭಗಿನಿಯರಾದ ನಂದಿನೀ ಸಂಪಾದಿಕೆಯರಲ್ಲಿ ಸೋದರೀ ವಿಶ್ವಾಸವಿಟ್ಟು, ಬಾಲಕರಾದ ನಮ್ಮ ಪ್ರಾರ್ಥನೆಯನ್ನು ಅಂಗೀಕರಿಸಿ, ಅಗ್ರಾಸನವನ್ನಲಂಕರಿಸಿರುವ ಸಬ್ ಡಿವಿಜನ್ ಆಫೀಸರವರಿಗೂ-ಸದಯಾಂತಃಕರಣದಿಂದ ಸಭೆಯನ್ನಲಂಕರಿಸಿರುವ ತಮಗೂ ಇದೊ ನಮ್ಮ ಕೃತಜ್ಞತಾಪೂರ್ವಕಧನ್ಯವಾದಗಳು.

ಪೂಜ್ಯರೇ!

ನಮ್ಮ ಭಗಿನಿಯ—ಮತ್ತು ಹಿರಿಯರ ಪ್ರೇರಣೆ—ಅಪ್ಪಣೆಯಂತೆ ಇಂದು ನಾವು ನಡೆಯಿಸುತ್ತಿರುವ ನಂದಿನೀ ವಾರ್ಷಿಕೋತ್ಸವ ಸಮಾರಂಭದಲ್ಲಿ ನಮ್ಮ ಇಂದಿನ ಯಥೋಚಿತವಾದ ಸೇವೆಯನ್ನು ಸ್ವೀಕರಿಸಿ, ಉತ್ಸವವನ್ನು ಸಾಂಗಗೊಳಿಸಿ-ಹಿತಾಹಿತಗಳನ್ನು ಸೂಚಿಸಿ ಪ್ರೋತ್ಸಾಹಿಸಬೇಕೆಂದು ಸವಿನಯವಾಗಿ ಪ್ರಾರ್ಥಿಸುವೆವಲ್ಲದೆ, ಭಜನೆ-ಉತ್ಸವ ಕಾರ್ಯ ಸಮಾರಂಭಕ್ಕೆ ತಮ್ಮ ಅಪ್ಪಣೆಯನ್ನು ನಿರೀಕ್ಷಿಸುತ್ತಿರುವೆವು-

ಇಂತು ಪ್ರಾರ್ಥಿಸುವ ಮಾತೃಮಂದಿರದ ವಿದ್ಯಾರ್ಥಿಗಳು.

———

ಶ್ರೀ

# ಮಾತೃಮಂದಿರದ ಸಂಕ್ಷಿಪ್ತವೃತ್ತವು



(ನಂದಿನೀ ವಾರ್ಷಿಕೋತ್ಸವದಲ್ಲಿ ಅಧ್ಯಕ್ಷರ ಮತ್ತು ಸಭಿಕರ ಮುಂದೆ ನಿವೇದಿಸಿದುದು.)

ಪೂಜ್ಯರಾದ ಆರ್ಯ ಬಾಂಧವರೇ!—ಆರ್ಯ ಮಾತೆಯರೇ!!

ಭಗವತ್ಕೃಪೆಯಿಂದಲೂ ಗುರುಜನರ ಆಶಿರ್ವಾದದಿಂದಲೂ ತಮ್ಮೆಲ್ಲರ ಉದಾರವಾದ ಆಶ್ರಯ ಪ್ರೋತ್ಸಾಹಗಳಿಂದಲೂ ನಂದಿನಿಯ ವಾರ್ಷಿಕೋತ್ಸವದ ಇಂದಿನ ಸಮಾರಂಭವನ್ನು ಬೆಳೆಯಿಸುವಂತಾಯಿತೆಂದು ನಿವೇದಿಸಲು ಆನಂದವುಂಟಾಗಿದೆ. ಇಂದಿನ ಇಷ್ಟರ ಆನಂದೋತ್ಸಾಹಕ್ಕೂ ಪ್ರೇರಕ ಪ್ರೋತ್ಸಾಹಕರಾಗಿರುವ ನಮ್ಮ ಹಿರಿಯರ ಮತ್ತು ತಮ್ಮೆಲ್ಲರ ಘನಸನ್ನಿಧಿಯಲ್ಲಿ, ಈ ನಮ್ಮ ನಂದಿನೀ—ಹಿತೈಷಿಣಿಯರ ವಿಚಾರವನ್ನೂ ಮಾತೃಮಂದಿರವು ಈ ವರೆಗೆ ನಿರ್ವಹಿಸಿರುವ ಕಾರ್ಯಗಳನ್ನೂ ಕ್ರಮವಾಗಿ ಸಂಕ್ಷೇಪವಾಗಿ ನಿವೇದಿಸುತ್ತಲಿರುವೆವು.

ನಮ್ಮ ಕನ್ನಡನಾಡಿನಲ್ಲಿ,—"ಸ್ತ್ರೀವಿದ್ಯಾಭ್ಯಾಸವು ಹೆಚ್ಚುತ್ತಿದ್ದರೂ ವಿದ್ಯಾವತಿಯರು ಅಲ್ಲಲ್ಲಿಗೆ ತೋರಿ ಬರುತ್ತಿದ್ದರೂ ಸ್ತ್ರೀ ಶಿಕ್ಷಣೆಯೂ ಶಿಕ್ಷಿತ ಸ್ತ್ರೀಯರ ಕಾರ್ಯ ವಿಚಾರಗಳೂ ಅಷ್ಟು ತೃಪ್ತಿಕರವಾಗಿಲ್ಲವೆಂದೂ,- ಇಷ್ಟುಮಂದಿ ವಿದ್ಯಾವತಿಯರಿದ್ದರೂ ಒಬ್ಬರಾದರೂ ಮುಂದೆ ಬಂದು ತಮ್ಮ ಸೋದರಿಯರ ಶ್ರೇಯಸ್ಸಾಧನೆಗಾಗಿ ಮುಂದೆ ನಿಂತು ಲೇಖನ-ವಾಚನ-ಪತ್ರಚಾಲನವೃತ್ತಿಗಳಲ್ಲಿ ಪ್ರವರ್ತಿಸದಿರುವುದು ನಮ್ಮ ನಾಡಿಗೆ ತುಂಬ ಕೊರತೆಯಾಗಿರುವದೆಂದೂ ನಮ್ಮ ಧರ್ಮಭ್ರಾತೃಗಳು ತಮ್ಮ ಪತ್ರಿಕೆಗಳಲ್ಲಿ ಪ್ರಸ್ತಾಪಿಸುತ್ತ ಬಂದುದರಿಂದ, ಭಗವತಿಯನ್ನು ಪ್ರಾರ್ಥಿಸಿ, ಗುರುಜನರ ಮತ್ತು ಭಗವತಿಯ ಅನುಜ್ಞೆಯನ್ನು ಪಡೆದು ಲೇಖನ ವೃತ್ತಿಗೆ ಪ್ರವರ್ತಿಸಿ, ೧೯೧೭ ಇಸವಿ ಅಕ್ಟೋಬರ್-ನವಂಬರ್ ತಿಂಗಳಲ್ಲಿ "ಸುಶೀಲೆ" ಎಂಬ ಪುಸ್ತಕವನ್ನು ಸತೀಹಿತೈಷಿಣೀ ಗ್ರಂಥಮಾಲೆಯ ಪ್ರಥಮ ಪುಷ್ಪವಾಗಿ ಪ್ರಕಟಿಸಿತು.

ಪುಸ್ತಕ ಪ್ರಚಾರಕ್ಕೆ ಇದೇ ಮೊದಲಾದುದರಿಂದ-ಈ ಪತ್ರಚಾಲನ ವೃತ್ತಿಯಲ್ಲಿ ಸ್ತ್ರೀಯರು ಪ್ರವರ್ತಿಸಿದುದು ಪ್ರಥಮವಾದುದರಿಂದ-ಬಹು ಜನರ ಆಗ್ರಹ-ಆಕ್ಷೇಪ ದ್ವೇಷ, ಅಸೂಯೆಗಳಿಗೆ ಭಾಜನರಾಗಬೇಕಾದೀತೆಂದು ಭಾವಿಸಿ, ನಮ್ಮ ಧರ್ಮ ಭ್ರಾತೃವರ್ಗೀಯರಲ್ಲಿ ಪರಿಗಣಿತರಾಗಿರುವ ಶ್ರೀಯುತ ಹನೂಮಾನ್ ಕಂಪನಿಯವರ ಹೆಸರಿನಿಂದ ಪ್ರಕಟಕ್ಕೆ ತಂದಿತು. ಹಾಗಾದರೂ ನಾವು ಮೊದಲು ಯೋಚಿಸಿದ್ದಂತೆ ವಿಘ್ನಗಳು ನಾಲ್ಕಾರು ಕಡೆಗಳಲ್ಲಿಯೂ ಸುತ್ತಿ ಬಂದೇಬಂದವು. ಹಾಗಾಗಿ ಗ್ರಂಥಮಾಲೆಯನ್ನು ಸ್ವತಂತ್ರವಾಗಿ ಹೊರಡಿಸುವುದೇ ಉತ್ತಮವೆಂದು ತಿಳಿದು, ಹಾಗೆಯೇ ಸ್ವಂತವಾಗಿ ನಡೆಯಿಸಲು ಮೊದಲು ಮಾಡಿ, ಬಂದ ಬಂದ ವಿಘ್ನಗಳನ್ನೆಲ್ಲ ದಾಟಿ ಭಗೀರಥ ಪ್ರಯತ್ನದಿಂದ ಮಾಲೆಯ ದ್ವಿತೀಯ ಪುಷ್ಪವಾದ "ನಭಾ" (ಸತೀತ್ವರಕ್ಷಿಣಿ) ಪುಸ್ತಕವನ್ನೂ ೧೯೧೪ನೆ ಆಗಸ್ಟ ತಿಂಗಳಲ್ಲಿ ಪ್ರಕಾಶಪಡಿಸಿ, ಅದೇ ವರ್ಷದ ಡಿಸೆಂಬರ್ ತಿಂಗಳಲ್ಲಿ "ವಿದ್ಯುಲ್ಲತೆ"ಯನ್ನೂ—೧೯೧೫ನೆ ಜನವರಿ ತಿಂಗಳಲ್ಲಿ "ವಿರಾಗಿಣಿ"ಯನ್ನೂ ೩—೪ನೆ ಪುಷ್ಪಗಳಾಗಿ ಪ್ರಚುರಪಡಿಸಿತು.

ಈ ನಾಲ್ಕು ಪುಸ್ತಕಗಳೂ ಒಂದು ವರ್ಷದ ಅವಧಿಯಲ್ಲಿ ಹೊರಡಬೇಕಾಗಿದ್ದರೂ ಮೇಲಿನ ವಿಘ್ನಗಳಿಂದ ಎರಡುವರ್ಷಕಾಲ ಹೊಡೆದಾಡಬೇಕಾಯಿತು.

ಅಲ್ಲಿಂದೀಚೆಗೆ, ಎಂದರೆ-೧೯೧೫ನೆ ಇಸವಿಯಿಂದ ಈ ನಮ್ಮ ಮಾತೃಮಂದಿರದ ಕಾರ್ಯವನ್ನು ನಿಯತವಾಗಿ ನಡೆಯಿಸಲು ನಿಶ್ಚಯಿಸಿ, ೧೯೧೫ನೆ ಡಿಸೆಂಬರ ತಿಂಗಳಲ್ಲಿ "ದಕ್ಷಕನ್ಯಾ" ಪುಸ್ತಕವನ್ನೂ ೧೯೧೬ನೆ ಫೆಬ್ರವರಿ ತಿಂಗಳಲ್ಲಿ "ಮಾತೃವಂದಿನಿ" "ರಮಾನಂದ" ಪುಸ್ತಕಗಳನ್ನೂ ಗ್ರಂಥಮಾಲೆಯ ೫-೬-೭ನೆ ಪುಷ್ಪಗಳಾಗಿ "ಭದ್ರಗೀತಾವಲಿ" ಎಂಬ ಹಾಡಿನ ಪುಸ್ತಕವನ್ನು ಮಾತೃನಂದಿನಿಯ ಕಾಣಿಕೆಯಾಗಿಯೂ "ವಿದ್ಯಾವಿಚಾರ"ವೆಂಬ ಉಪನ್ಯಾಸವನ್ನು ರಮಾನಂದದ ಕಾಣಿಕೆಯಾಗಿಯೂ ಪ್ರಚಾರಕ್ಕೆ ತಂದುದಾಯಿತು.

ಅಲ್ಲಿಂದೀಚೆಗೆ ಲೇಖನಕಾರ್ಯಕ್ಕೆ ಕಾಯಿಲೆಯೇ ಮೊದಲಾದ ಅಡಚಣೆಗಳುಂಟಾದುದರಿಂದ ಮತ್ತೆ ೬-೭ ತಿಂಗಳವರೆಗೆ ತಡೆದಿದ್ದು

೧೯೧೬ನೆ ಸೆಪ್ಟಂಬರ್-ಅಕ್ಟೋಬರ್ ತಿಂಗಳಲ್ಲಿ "ವಿಕ್ರಮ" "ಚಂದ್ರವದನೆ"ಗಳನ್ನು ಮಾಲೆಯ ೮—೯ನೆ ಪುಷ್ಪಗಳಾಗಿಯೂ "ಸೇವಾ ವಿಚಾರ"ವೆಂಬ ಉಪನ್ಯಾಸವನ್ನು ಚಂದ್ರವದನೆಯ ಕಾಣಿಕೆಯಾಗಿಯೂ ಹೊರಪಡಿಸಿತು. ಅಲ್ಲಿಂದೀಚೆಗೆ ಅತಿಯಾದ ಆಯಾಸ-ಬೇಸರಗಳುಂಟಾಗಿ, ಪ್ರವಾಸದ ಆವಶ್ಯಕತೆಗೆ ಹೆಚ್ಚಾದುದರಿಂದ ಲೇಖನ ಕಾರ್ಯವನ್ನು ಈ ವರೆಗೆ ನಿಲ್ಲಿಸಿರಬೇಕಾಗಿ ಬಂದಿತು. ಭಗವತ್ಕೃಪೆಯಿಂದ ಈಗಲೇ-ಗ್ರಂಥಮಾಲೆಯ ೧೦ನೆ ಪುಷ್ಪವಾಗಿ "ಪೂರ್ಣಕಲಾ" ಪುಸ್ತಕವು ಸಚಿತ್ರವಾಗಿ ಪ್ರಕಟವಾಗಿರುವುದೆಂದೂ-ಇನ್ನೂ ೧೧—೧೨ನೆ ಪುಷ್ಪಗಳಾದ "ವಿದ್ಯಾವಿನೋದ" "ಬ್ರಹ್ಮಚಾರಿಣಿ" ಪುಸ್ತಕಗಳು ಮುದ್ರಣದಲ್ಲಿದ್ದು ಮುಂದಿನ ಮಾರ್ಚಿ ತಿಂಗಳೊಳಗಾಗಿ ಬಹುಮಾನ ಪುಸ್ತಕಗಳೊಡನೆ ಪ್ರಕಾಶಕ್ಕೆ ಬರುವಂತಾದೀತೆಂದೂ ನಿವೇದಿಸಲು ಸಂತೋಷವಾಗುತ್ತಿದೆ.

ಹೀಗೆ ಸತೀಹಿತೈಷಿಣೀ ಗ್ರಂಥಮಾಲೆಯ ಕಾರ್ಯವು ನಡೆಯುತ್ತಿರುವಾಗಲೇ ನಮ್ಮ ಸೋದರಿಯರ ಉಪಯೋಗಕ್ಕೆಂದು ಸ್ವತಂತ್ರವಾದ ಮಾಸಪತ್ರಿಕೆಯೊಂದನ್ನು ಹೊರಡಿಸುವುದು ಅವಶ್ಯಕವಾಗಿ ತಿಳಿದುದರಿಂದ ' ನಂದಿನಿ 'ಯನ್ನು ಅದರ ಪ್ರಥಮಕಾಣಿಕೆಯಾದ "ಸುಮುಖೀವಿಜಯ"ವೆಂಬ ಹರಿಭಜನ ಗ್ರಂಥದೊಡನೆ ನಳಸಂವತ್ಸರದ ಆಶ್ವಯುಜ ಶುದ್ಧ ದಶಮಿ [ವಿಜಯದಶಮಿ ೧೯೧೬ನೆ ಅಕ್ಟೋಬರ್]ಯಲ್ಲಿ ಪ್ರಕಾಶಕ್ಕೆ ತಂದುದಾಯಿತು. ಸಂಕಲ್ಪಕ್ಕೂ ಪ್ರಯತ್ನಕ್ಕೂ ತಕ್ಕಂತೆ ಈ ಮೊದಲು ವರ್ಷದಲ್ಲಿ ನಂದಿನಿಯ ದೇಶಸೇವೆಯು ಸುಲಲಿತವಾಗಿ ನಡೆದುಬಂದಿರುವುದಲ್ಲದೆ, ಮುಂದಿನ ವರ್ಷದಲ್ಲಿ ಸೇವಾಕಾರ್ಯವು ಮತ್ತೂ ಶ್ಲಾಘ್ಯವಾಗಿಯೂ-ದೇಶಭಗಿನೀ-ಭ್ರಾತೃವರ್ಗಕ್ಕೆಲ್ಲಾ ಉಪಯೋಗಕರವಾಗಿಯೂ ಆಗುವಂತೆ ಭಗವತ್ಕೃಪೆಯಾದೀತೆಂದು ನಿರೀಕ್ಷಿಸುತ್ತಿರುವೆದು.

(ದೇಶೀಯರ ಪ್ರೋತ್ಸಾಹ)

ಸತೀಹಿತೈಷಿಣೀ ( ತ್ರೈಮಾಸಿಕ ) ಗ್ರಂಥಮಾಲೆಗೆ ಈ ವರೆಗೆ ೩೦೦ಮಂದಿ ಶಾಶ್ವತ ಚಂದಾದಾರರೂ, ನಂದಿನಿಗೆ ೨೫೦ಮಂದಿ ಚಂ

ದಾದಾರರೂ ಇರುವರಲ್ಲದೆ ನಮ್ಮ ಕರ್ಣಾಟಕದಲ್ಲೆಲ್ಲಾ ಹಿತೈಷಿಣಿಗೆ ವಿಶೇಷವಾದ ಪ್ರೋತ್ಸಾಹವು ದೊರೆಯುತ್ತಿರುವದು.

(ವಿದ್ಯಾಂಗದವರ ಸಹಾಯ)

"ಸತೀಹಿತೈಷಿಣೀ" ಗ್ರಂಥಮಾಲೆಯಲ್ಲಿ ಪ್ರಚುರವಾಗಿರುವ ಗ್ರಂಥಗಳಲ್ಲಿ 'ಸುಶೀಲೆಯು' ೧೦೦ ಪ್ರತಿಗಳನ್ನೂ 'ಸಭಾ' ಪುಸ್ತಕದ ೨೮೦ ಪ್ರತಿಗಳನ್ನೂ 'ವಿದ್ಯುಲ್ಲತಾ' 'ವಿರಾಗಿಣಿ'ಗಳಲ್ಲಿ ೧೦೦—೧೦೦ ಪ್ರತಿಗಳನ್ನೂ, ದಕ್ಷಕನ್ಯಾ-ಮಾತೃನಂದಿನಿಗಳಲ್ಲಿ ೫೦—೫೦ ಪ್ರತಿಗಳನ್ನೂ ವಿಕ್ರಮದ ೩೦ ಪ್ರತಿಗಳನ್ನೂ ಚಂದ್ರವದನೆಯ ೩೬೮ ಪ್ರತಿಗಳನ್ನು ಸ್ವೀಕರಿಸಿ, ವಿಶೇಷವಾಗಿ ಪ್ರೋತ್ಸಾಹಿಸಿರುವುದಲ್ಲದೆ ರಮಾನಂದವನ್ನು ಇಂಗ್ಲಿಷ್ IV ಫಾರಂ, ಪಠ್ಯಪುಸ್ತಕವಾಗಿಯೂ ವಿಕ್ರಮವನ್ನು ಅಪ್ಪರ್ ಸೆಕಂಡರಿ ಪಠ್ಯಪುಸ್ತಕವಾಗಿಯೂ ಏರ್ಪಡಿಸಿ-ವಿದ್ಯಾಂಗದವರು, ಹಿತೈಷಿಣಿಯನ್ನು ಗೌರವಿಸಿರುವರು.

ಮದ್ರಾಸು ವಿದ್ಯಾಂಗದವರು ಕೂಡ 'ವಿದ್ಯುಲ್ಲತೆ'ಯನ್ನು ಅಲ್ಲಿಯ ಇಂಟರ್‌ಮೀಡಿಯೇಟ್ ಪರೀಕ್ಷೆಗೆ ಪಠ್ಯಪುಸ್ತಕವಾಗಿ ಏರ್ಪಡಿಸಿ, "ಸುಶೀಲೆ" "ರಮಾನಂದ" "ಮಾತೃನಂದಿನಿ" 'ಸುಮುಖೀವಿಜಯ' "ಭದ್ರಗೀತಾವಲಿ"ಗಳನ್ನು ಪಾಠ ಪುಸ್ತಕಗಳಾಗಿಯೂ "ದಕ್ಷಕನ್ಯೆ" ಯನ್ನು ಲೈಬ್ರರಿಯ ಪುಸ್ತಕವಾಗಿಯೂ ಇಡಲು ಅಂಗೀಕಾರ ಪ್ರದರ್ಶನ ಮಾಡಿರುವರು. ಧಾರವಾಡದ ವಿದ್ಯಾಂಗದವರು "ಸಭಾ" ಪುಸ್ತಕವನ್ನು ಬಹುಮಾನ ಪುಸ್ತಕವಾಗಿ ಏರ್ಪಡಿಸಿರುವರು. *

---

* (ಧಾರವಾಡದ ವಿದ್ಯಾಂಗದವರ ಸಮ್ಮುಖದಿಂದ ಬಂದಿರುವ ಪತ್ರವು ಹೀಗಿದೆ.)

MEMORANDUM— No. 1652 of 1917-18

office of the

*Educational Inspector S.D.*

Dharwar, 11th May 1917.

With reference to her letter dated 15th September 1914 to the address of the Director of

(ಬಹುಮಾನ-ಮತ್ತು ಪೋಷಣದ್ರವ್ಯ)

ಸತೀಹಿತೈಷಿಣಿ ಗ್ರಂಥಮಾಲೆಗಾಗಿ ಸುಶೀಲೆಯಿಂದ ದಕ್ಷಕನ್ಯೆಯವರೆಗೆ ೭೫ ರೂಪಾಯಿಗಳನ್ನೂ ಮಾತೃನಂದಿನಿ, ರಮಾನಂದ, ಚಂದ್ರವದನೆಗಳಿಗಾಗಿ ೯೫ ರೂಪಾಯಿಗಳನ್ನೂ ಬಹುಮಾನವಾಗಿ ಕೊಟ್ಟು, ಮದ್ರಾಸು ಲಿಟರೇಚರ್ ಸೋಸೈಟಿ-ಮತ್ತು ಸ್ಕೂಲ ಬುಕ್ ಕಮೀಟಿಯವರು ಪ್ರೋತ್ಸಾಹಿಸಿರುವರು. ಧಾರವಾಡದ ವಿದ್ಯಾವರ್ಧಕ ಸಂಘದವರು "ನಭಾ" ಪುಸ್ತಕಕ್ಕಾಗಿ ೫ಂರೂಪಾಯಿಗಳನ್ನೂ ವಿದ್ಯುಲ್ಲತೆಗಾಗಿ ೩ಂ ರೂಪಾಯಿಗಳನ್ನೂ ಬಹುಮಾನವಾಗಿ ಕೊಟ್ಟಿರುವರು. ಇದಲ್ಲದೆ ಚೀಫಕೋರ್ಟ ಜಡ್ಜಿಯವರಾದ ಶ್ರೀಯುತ ಕೆ. ಎಸ್. ಚಂದ್ರಶೇಖರ ಅಯ್ಯರ್ ಬಿ. ಎ., ಬಿ. ಎಲ. ಅವರ ಪತ್ನಿ ಶ್ರೀ॥ ಸೌ॥ ಪಾರ್ವತಮ್ಮನವರು ಸತೀಹಿತೈಷಿಣಿಗೆ ೩ಂ ರೂಪಾಯಗಳನ್ನೂ ಪೋಷಣದ್ರವ್ಯವಾಗಿ ಕೊಟ್ಟಿರುವರು.

ಕರ್ಣಾಟಕ ನಂದಿನಿಗೆ ನಮ್ಮ ಪ್ರಭುವರೇಣ್ಯರಾದ ಶ್ರೀ ಮನ್ಮಹಾರಾಜರವರಿಂದ ೫ಂರೂ. ಪೋಷಣದ್ರವ್ಯವೂ, ಶ್ರೀಮನ್ಮಹಾರಾಣಿಯವರಿಂದ ೧ಂರೂಪಾಯಿ ಪೋಷಣದ್ರವ್ಯವೂ ಶ್ರೀಮಾನ್ ದಿವಾನರವರಿಂದ ೫ರೂಪಾಯಿಗಳೂ ಶ್ರೀ॥ ಸೌ॥ ಪಾರ್ವತಮ್ಮನವರಿಂದ ೧ಂ ರೂಪಾಯಿಗಳೂ ಪೋಷಣದ್ರವ್ಯವಾಗಿ ಅನುಗ್ರಹಿಸಲ್ಪಟ್ಟಿರು

---

Public Instruction, Mrs. Tirumalamma of Nanjangud is informed that her book entitled—"Sateetva Rakshini" is, on the recommendation of the Divisional Vernacular Book Committee, sanctioned as a prize book for Primary Schools and that the sanction will be notified in the Kanarese School Paper in due course.

Sd.

*For Ag. Educational Inspector, S.D.*

ವುವು. ಅಲ್ಲದೆ ನಂದಿನಿಯ ಅಭ್ಯುದಯಾಕಾಂಕ್ಷಿಗಳಾದ ನಮ್ಮ ಘನ ವಿದ್ಯಾಂಗದವರು ೫೦ ಪ್ರತಿಗಳಂತೆ ಸ್ವೀಕರಿಸುತ್ತ ಪ್ರೋತ್ಸಾಹಿಸುತ್ತಿರುವರು.

(ಪುನರ್ಮುದ್ರಣ)

ಮೇಲೆ ಹೇಳಿದಂತೆ ಹಿತೈಷಿಣಿಗೆ ಬಹುಮುಖವಾಗಿ ದೊರೆತ ಪ್ರೋತ್ಸಾಹದಿಂದ ಸುಶೀಲೆಯ ಪ್ರಥಮ ಮುದ್ರಣದ ೧೦೦೦ಪ್ರತಿಗಳು ಮುಗಿದು ಹೋಗಿ ೧೯೧೫ರಲ್ಲಿ ಮತ್ತೆ ೧೫೦೦ ಪ್ರತಿಗಳು ದ್ವಿತೀಯ ಮುದ್ರಣವಾಗಿ ಈಗಾಗಲೇ ಅವುಗಳಲ್ಲಿ ೬೦೦ ಪ್ರತಿಗಳು ಮುಗಿದು ಹೋದುವು. ರಮಾನಂದದ ೧೦೦೦ಪ್ರತಿಗಳು ಮುಗಿದು ಈಗ ನಾಲ್ಕು ತಿಂಗಳಲ್ಲಿ (೧೯೧೭ ಜೂನ್) ಪುನರ್ಮುದ್ರಣದ ೧೦೦೦ ಪ್ರತಿಗಳು ಪ್ರಕಟಿಸಲ್ಪಟ್ಟು ಈ ವರೆಗೆ ೬೫೦ ಪ್ರತಿಗಳಿಗೆ ಹೆಚ್ಚಾಗಿ ಮುಗಿದಿರುವುವು. ಸಭಾಪುಸ್ತಕವು ಮುಗಿದು, ಒಂದುಪ್ರತಿಯಾದರೂ ಉಳಿಯದೆ ಹೋಗಿರುವುದರಿಂದಲೂ ಪ್ರಥಮ ಮುದ್ರಣಕಾಲದಲ್ಲಿ ಪರಿಶೋಧಕರ ಅಸ್ವಾಸ್ಥ್ಯ-ಮತ್ತು ಪ್ರಮಾದಗಳಿಂದ ಅಲ್ಲಲ್ಲಿಗೆ ಭಾವಗಳೇ ಭೇದಿಸಿರುವುದರಿಂದಲೂ-ತಪ್ಪುಗಳು ಹೇರಳವಾಗಿ ಉಳಿದಿರುವುದರಿಂದ, ಪುನಃ ಪರಿಷ್ಕೃತವಾಗಿ ಪುನರ್ಮುದ್ರಣಕ್ಕಾಗಿ ಏಪ್ರಿಲ್ ತಿಂಗಳಲ್ಲಿಯೇ ಮುದ್ರಾಲಯಕ್ಕೆ ಕಳುಹಲ್ಪಟ್ಟಿರುವುದು; ಕಾರಣಾಂತರಗಳಿಂದ ಮುದ್ರಣವು ಈ ವರೆಗೆ ತಡೆದಿದ್ದು ಈಗ ಪ್ರಾರಂಭವಾಗಿರುವುದು.

ಇಲ್ಲಿಯವರೆಗೆ ಹಿತೈಷಿಣಿ ನಂದಿನಿಯರ ಕಾರ್ಯಕ್ರಮ ಆಶ್ರಯ ಪ್ರೋತ್ಸಾಹಗಳ ವಿಚಾರವು ಸಂಕ್ಷೇಪವಾಗಿ ನಿವೇದಿಸಲಾಯಿತು. ಇನ್ನು ಇವರ ಮುಂದಿನ ವಿಚಾರವಾಗಿ ಸ್ವಲ್ಪ ಹೇಳಬೇಕಾಗಿರುವುದು.

ನಂದಿನಿಯು ವಿಶೇಷವಾಗಿ ಸ್ತ್ರೀಯರ ಉಪಯೋಗಕ್ಕೆಂದೇ ಹೊರಟಿರುವುದಾದರೂ ಅವರು ಅಷ್ಟಾಗಿ ಗಮನಿಸುತ್ತಿಲ್ಲವೆಂದು ತಿಳಿಸಲು ವಿಷಾದಿಸಬೇಕಾಗಿದೆ. ಆದರೆ ಈಚೀಚೆಗೆ ನಮ್ಮ ಮಹಿಳೆಯರು ಇತ್ತಕಡೆಗೆ ಕಟಾಕ್ಷಿಸುತ್ತಿರುವರೆಂದು ತಿಳಿದು ಸಮಾಧಾನ ಪಡುವೆವಲ್ಲದೆ ಅವರ ಉಪಯೋಗ-ಮತ್ತು ಬಾಲ-ಬಾಲೆಯರ ಅನುಕೂಲಕ್ಕಾಗಿ ೧೨ನೆ ಸಂಚಿಕೆಯಲ್ಲಿ ಸೂಚಿಸಿರುವಂತೆ ಕೆಲವು ಸುಧಾರಣೆಗಳನ್ನು ಕೈಕೊಂಡಿರು

ವೆವು ಇನ್ನುಮುಂದೆ ಸತೀಹಿತೈಷಿಣೀ ಗ್ರಂಥಮಾಲೆಯುಕೂಡ ವಿದ್ಯಾರ್ಥಿವರ್ಗಕ್ಕೆ ಸಹಾಯವಾಗಿಯೂ ನಮ್ಮ ಬಂಧು ಭಗಿನಿಯರಿಗೆ ಉಪಯೋಗವಾಗುವಂತೆಯೂ ಉಪಯುಕ್ತಾಂಶಗಳಿಂದ ಸಚಿತ್ರವಾಗಿಯೇ ಕಾಲ ಕಾಲಗಳಲ್ಲಿ ಪ್ರಕಟವಾಗುವವು.

(ನಾಟ್ಯಮಂದಿರದ ವಿಚಾರ)

ಈ ಮಂದಿರದಲ್ಲಿ ನಳ ಸಂ॥ ಆಶ್ವಯುಜದಿಂದ ಪಿಂಗಳ ಚೈತ್ರದ ವರೆಗೆ ವಿದ್ಯಾರ್ಥಿಗಳಿಗೆ ರಾತ್ರಿ ಪಾಠವು ನಡೆಯುತ್ತಿದ್ದವು. ಇದೇ ಪಿಂಗಳ ಸಂ॥ ಆಶ್ವಯುಜ ಶುದ್ಧ ದಶಮಿಯಲ್ಲಿ ವಿದ್ಯಾರ್ಥಿಗಳ ಸಂಘವೊಂದನ್ನು ನಿಯಮಿಸಿ, ಅದರ ಶಾಖೆಯಾಗಿ ನಾಟಕ ಸಂಘವನ್ನು ಏರ್ಪಡಿಸಿರುವುದಲ್ಲದೆ, ಅವರ ಉಪಯೋಗಕ್ಕಾಗಿ ಒಂದು ಪುಸ್ತಕಭಂಡಾರವನ್ನೂ ವಾಚನ ಶಾಲೆಯನ್ನೂ ಏರ್ಪಡಿಸಿಕೊಟ್ಟು, ಅವರಿಗೆ ಬೇಕಾಗುವ ಗ್ರಂಥಗಳನೂ-ಇತರ ಸಾಮಾನುಗಳನ್ನೂ ಒದಗಿಸಿಕೊಡುವ ವಿಚಾರದಲ್ಲಿ ನಾಟ್ಯಮಂದಿರವು ತುಂಬ ಆಸಕ್ತಿಯನ್ನು ತೋರಿಸುತ್ತಿರುವುದು. * ದೈವಾನುಗ್ರಹದಿಂದ ಈ ಪ್ರಯತ್ನವು ಸುಲಲಿತವಾಗಿ ನಡೆಯುವದಾಗಿ ಗೊತ್ತಾದರೆ ಶೀಘ್ರದಲ್ಲಿಯೇ ನಮ್ಮ ಭಗಿನಿಯರ ಕಾಲಕ್ಷೇಪಕ್ಕೂ ಅನುವನ್ನು ಕಲ್ಪಿಸಬೇಕೆಂಬ ಕುತೂಹಲವು ಬಹುವಾಗಿರುವದು.

ಈ ವರೆಗೆ ನಮ್ಮ ನಾಟ್ಯಮಂದಿರಕ್ಕಾಗಿರುವ ದ್ರವ್ಯರೂಪವಾದ ನಷ್ಟವನ್ನು ನಾವು ನಷ್ಟವೆಂದು ಭಾವಿಸದೆ ಅದರಿಂದ ವಿಶೇಷವಾಗಿ ಕರ್ತವ್ಯನಿಷ್ಠೆಯೂ-ವ್ಯಕ್ತಿಸ್ವಭಾವಜ್ಞಾನವೂ, ಪ್ರಕೃತಿವಿಚಾರವೂ-ಹಣದ ಸ್ವಭಾವವೂ ತಿಳಿದು ಬಂದುದರಿಂದ ಅದನ್ನು ಲಾಭವೆಂದೇ ನಂಬಿರುವ ನಾವು ವ್ಯಯದ ವಿಚಾರವಾಗಿ ಇಲ್ಲಿ ಪ್ರಸ್ತಾಪಿಸಲಾರೆವು.

ಈ ಉತ್ಸವದಲ್ಲಿ ಮೊದಲೇ ನಿವೇದಿಸಿರುವಂತೆ "ರಮಾನಂದ" ನಾಟಕವನ್ನು ಪ್ರದರ್ಶಿಸಲು ಕಾರಣವೆಂದರೆ, ನಮ್ಮ ಧರ್ಮ ಬಾಧ

* ಈ ವಿಚಾರವಾದ ನಿಯಮ ಮತ್ತು ಪುಸ್ತಕ ಸಂಖ್ಯಾವಿಷಯವು ಮುಂದಿನ ಸಂಚಿಕೆಯಲ್ಲಿ ಬರುವವು.

ಗೂ, ಆಗ್ರಾಸನವನ್ನು ಸ್ವೀಕರಿಸಿ ನಮ್ಮನ್ನು ಪ್ರೋತ್ಸಾಹಿಸುದುದಕ್ಕಾಗಿ ನಮ್ಮ ಸಬ್ ಡಿವಿಜನ್ ಆಫೀಸರ-ಶ್ರೀಯುತ, ಏ. ಕೃಷ್ಣಸ್ವಾಮಯ್ಯಂ ಗಾರ್, ಬಿ. ಎ., ಅವರಿಗೂ-ಮತ್ತು ಇಲ್ಲಿಯ ವರೆಗೆ ಚಿತ್ತೈಸಿ ಶ್ರಮವನ್ನು ಕೂಡ ಗಣಿಸದೆ ಉತ್ಸವವನ್ನು ನೆರವೇರಿಸಲು ಅನುಗ್ರಹಿಸಿರುವ ತಮ್ಮೆಲ್ಲರಿಗೂ ಈ ಮೂಲಕ ನಮ್ಮ ಕೃತಜ್ಞತಾಪೂರ್ವಕ ವಂದನೆಗಳನ್ನು ಒಪ್ಪಿಸಿರುವೆವಲ್ಲದೆ ಸಹೃದಯದಿಂದ ತಾವೆಲ್ಲರೂ ಇಂದಿನ ಉತ್ಸವಕಾರ್ಯವನ್ನು ಸಾಂಗಗೊಳಿಸಬೇಕೆಂದು ಪ್ರಾರ್ಥಿಸುತ್ತಿರುವೆವು.

೩೦—೧೧—೧೭ ಪಿಂ॥ ಆಶ್ವಯುಜ ಶು॥ ೧೫ } ಇಂತು ಸಂಪಾದಿಕೆಯ ಪರವಾಗಿ ನಿವೇದಿಸುವ ವಾತ್ಸ್ಯಮಂದಿರದ ವಿದ್ಯಾರ್ಥಿಗಳು.

## ವಂದನಾಪೂರ್ವಕ ಸ್ವೀಕಾರ

"ಈ ಮುಂದೆ ವಿವರಿಸುವ ಪತ್ರಿಕೆ-ಪುಸ್ತಗಳನ್ನು ವಂದನೆಯೊಡನೆ ಸ್ವೀಕರಿಸಿರುವೆವಲ್ಲದೆ ಅವುಗಳನ್ನು ಕಳುಹಿದುದಕ್ಕಾಗಿ ಆ ನಮ್ಮ ಧರ್ಮಭ್ರಾತೃಗಳಿಗೆ ನಮ್ಮ ಕೃತಜ್ಞತಾಪೂರ್ವಕ ಧನ್ಯವಾದಗಳನ್ನೊಪ್ಪಿಸುವೆವು. ಸ್ಥಳಾಭಾವದಿಂದ ಅವನ್ನಿಲ್ಲಿ ವಿಮರ್ಶಿಸಲಾಗಲಿಲ್ಲವಾಗಿ ಅವರ ಕ್ಷಮೆಯನ್ನು ಕೋರುತ್ತಿರುವೆವು.

೧ ಆಲ್ ಇಂಡಿಯಾ ಅಡ್ವೈಟೈರ್ಸರ್(All India Advertiser) (ಪಕ್ಷಪತ್ರಿಕೆ)—ಬೆಂಗಳೂರು

೨ ಕಥಾಮಾಲಿನಿ—(ಸಂಪುಟ೧. ಸಂಚಿಕೆ ೧—೧೧ವರೆಗೆ) ವಾರಪತ್ರಿಕೆ. ಮಕ್ಕಳಿಗಾಗಿಯೇ ವಾರಕ್ಕೊಂದು ಬಾರಿ ಕಥಾರೂಪದಿಂದ ಪ್ರಕಟವಾಗುತ್ತದೆ.

೩ ಮಹಾದೇವಪೇಟೆ ವಿದ್ಯಾವರ್ಧಕ ಸಂಘದ ದ್ವಿತೀಯ ವರ್ಷದ ವರದಿ (ಹಸ್ತಪತ್ರಿಕೆ)

೪ ನಗೆಗೇಡು (ಅಕ್ಷರಾಂಜಲಿ ಸಂ. ೩ ಸಂಚಿಕೆ ೨—೬)

## ಕ್ಷಮಾಪಣೆ

ನಂದಿನಿಯ ಶ್ರಾವಣ (ಆಗಸ್ಟ) ಸಂಚಿಕೆಯಲ್ಲಿ ನಿವೇದಿಸಿದ್ದಂತೆ ವಿವಾಹ ನಿಮಿತ್ತ ಪ್ರವಾಸ ಮತ್ತು ಇತರ ಕಾರ್ಯಗೌರವಗಳಿಂದಲೂ

ಒಂದುತಿಂಗಳ ವಿಶ್ರಾಂತಿಯು ಅತ್ಯಾವಶ್ಯಕವಾಗಿ ಬೇಕಾಗಿದ್ದುದರಿಂದ ಲೂ ದ್ವಿತೀಯ ವರ್ಷದ ಈ ಸಂಚಿಕೆಯನ್ನು ಸಕಾಲದಲ್ಲಿ ಹೊರಡಿಸಲು ಆಗದೆ ಹೋದುದಕ್ಕಾಗಿ ಬೇಸರಿಸಬಾರದೆಂದು ಕೋರಿಸುವದಲ್ಲದೆ ಪ್ರಥಮ ವರ್ಷದ ಕಾಣಿಕೆಯ ಸಾಲವಾದ ಜಾನಕೀ ಕಲ್ಯಾಣವನ್ನು ನಮ್ಮ ವರ್ಗಣೀದಾರರಿಗೆ ಮಾರ್ಚ ತಿಂಗಳೊಳಗಾಗಿ ನಿವೇದಿಸುವೆವೆಂದೂ ಇಲ್ಲಿಯ ವರೆಗೆ ವಿಳಂಬಿಸಿದುದಕ್ಕೆ ಕ್ಷಮೆಯನ್ನು ಕೋರುವೆವೆಂದೂ ನಿವೇದಿಸುತ್ತಿರುವೆವು.

ಸಂ. ನಂ.

---

ಕರ್ನಾಟಕ ವಾಚನಮಂದಿರಂ, ಬಾಗಲಕೋಟೆ—೮-೧೧-೧೭

(ನಂದಿನಿಗೆ ಬಂದಿರುವ)

# ಅಭಿಪ್ರಾಯ ನಿವೇದನವು

ನಂದಿನಿ ಮಾಸಪತ್ರಿಕೆಯ ಸಂಪಾದಿಕೆಯರ ಸನ್ನಿಧಿಯಲ್ಲಿ—

ತಾವು ಸಾಹಸಪಟ್ಟು ಪ್ರತಿತಿಂಗಳಲ್ಲಿ ಹೊರಡಿಸುತ್ತಿರುವ "ನಂದಿನಿ"ಯ ಪ್ರಥಮ ವರ್ಷದ ೧೨ ಸಂಚಿಕೆಗಳನ್ನು ಹರ್ಷಚಿತ್ತರಾಗಿ ನಿರೀಕ್ಷಿಸಿದೆವು. ಇಡಿಯ ವರ್ಷದಲ್ಲಿ ಪ್ರಕಟವಾದ ಲೇಖಗಳೆಲ್ಲವೂ ತುಸು ಹೆಚ್ಚು ಕಡಿಮೆ ಪ್ರಮಾಣದಿಂದ ಶ್ಲಾಘನೀಯವಾಗಿವೆ. ವಿದ್ಯಾವಿಚಾರದಲ್ಲಿಯೂ, ಸ್ತ್ರೀ ಶಿಕ್ಷಣಪರವಾಗಿಯೂ ನಡೆಯಿಸಿರುವ ತಮ್ಮ ಪ್ರಯತ್ನಗಳು ಕರ್ಣಾಟಕದ ಕೆಲವು ಮಾಸಪತ್ರಿಕೆ(ಪುರುಷವರ್ಗದವರಿಂದ ಹೊರಡಿಸಲ್ಪಡುವವು.)ಗಳ ಚಾಲಕರನ್ನು ನಾಚಿಸುವಂತೆ ತುಟಾಗ್ರತೆಯ ಈಗಿನಕಾಲದಲ್ಲಿ ಕೇವಲ ಪರೋಪಕಾರ ಬುದ್ಧಿಯಿಂದ ತನುಮನೋಧನಗಳನ್ನು ಅರ್ಪಿಸುವಂತೆ ಕಾಣುವ ತಮ್ಮ ಸಾಹಸಕ್ಕೆ ಎಣೆಯೇ ಇಲ್ಲವೆನ್ನಬೇಕಾಗಿದೆ.

ಪ್ರಥಮ ಸಂಪುಟದಲ್ಲಿ ಪ್ರಸಿದ್ಧವಾದ ಲೇಖನಗಳಲ್ಲಿ "ಕನ್ನಡ

ರನ್ನಗನ್ನಡಿ"ಯು ಓನಾಲು (ದಿನವೂ) ಪ್ರಾತಃಕಾಲದಲ್ಲಿ ಮುಖಾವಲೋಕನದ ಕನ್ನಡಿಗಿಂತಲೂ ಹೆಚ್ಚು ಫಲಕಾರಿಯಾಗಿರುವದರಲ್ಲಿ ಸಂದೇಹವೇನೂ ಇಲ್ಲ. ದೇಶೋನ್ನತಿಯ ಕಲ್ಪನೆಯನ್ನೂ ಅದಕ್ಕಾಗಿ ಪ್ರಯತ್ನಪಡುವ ಬುದ್ಧಿಯನ್ನೂ ಹುಟ್ಟಿಸಲು ಎಳಸುವ "ದೇಶೋನ್ನತಿ" ಲೇಖಕರಾದ ಮ|| ವೃತ್ತಮಣಿ-ವೆಂಕಟಕೃಷ್ಣ ಐಯ್ಯಂಗಾರರವರು ನಿಜವಾಗಿ ದೇಶಕಲ್ಯಾಣ ತತ್ಪರರೂ ಸ್ತ್ರೀಸಮಾಜದ ಹಿತೈಷಿಗಳೂ ಆಗಿರುವರು. ಇಂತಹ ಭ್ರಾತೃಗಳ ಸಹಾಯವೂ ತಮಗೆ ವಿಶೇಷವಾಗಿ ಬೇಕಾಗಿದೆಯಲ್ಲವೆ?—"ಭಾವನಾಲೋಕನ" ದಂತಹ ಕೆಲವು ಲೇಖಗಳು ಸಾಮಾನ್ಯ ಸ್ತ್ರೀ ವಾಚಕರಿಗೆ ತುಸು ಕಠಿಣವೆನಿಸಿದರೂ ಆ ಕಾಠಿಣ್ಯವನ್ನು ನಮ್ಮ ಭ್ರಾತೃವರ್ಗದವರು ಹೇಗಾದರೂ ನಿವಾರಿಸುವರೆಂಬಲ್ಲಿ ಸಂಕೋಚ ಪಡಬೇಕಾಗಿಲ್ಲ. ಆದರೂ ಸಂಪಾದಿಕೆಯರು ಸುಲಭ ಭಾಷೆಯುಳ್ಳ ಕೆಲವು ಲೇಖನಗಳನ್ನಾದರೂ ಪ್ರತಿತಿಂಗಳೂ ಪ್ರಕಟಿಸುವರೆಂದು ಆಶಿಸಲು ಅವಕಾಶವಿದೆ. ಯಾಕಂದರೆ, ಸ್ತ್ರೀವಾಚಕರು ಬಹುತರವಾಗಿ ಓದು ಬರಹಗಳನ್ನು ಮಾತ್ರ ಶಾಲೆಗಳಲ್ಲಿ ಕಲಿತಿರುವರಲ್ಲದೆ, ಹೆಚ್ಚಿನ ಭಾಷಾಭ್ಯಾಸದ ರೂಢಿಯು ಅವರಿಗಿರುವದಿಲ್ಲ.

ಪ್ರತಿತಿಂಗಳಲ್ಲಿ ಅಥವಾ ನಿಕೃಷ್ಟ ಪಕ್ಷಕ್ಕೆ ಪ್ರತಿಮೂರು ತಿಂಗಳಿಗೊಮ್ಮೆ ಸ್ತ್ರೀ ಲೇಖಕರಿಗೆ ಒಂದೊಂದು ವಿಷಯವನ್ನು ಅಥವಾ ಚಿಕ್ಕಪುಟ್ಟ ಕಥೆಗಳನ್ನು ನೇಮಿಸಿಕೊಟ್ಟು ಮೇಲಾದವರಿಗೆ ಇನಾಮು ಕೊಡುವ ರೂಢಿಯನ್ನಿಡಬೇಕೆಂದು ನಮ್ಮ ಸೂಚನೆಯಿದೆ. ಇದರಿಂದ ಸ್ತ್ರೀಯರಿಗೆ ಬಹಳೇ ಉತ್ತೇಜನ ದೊರೆಯುವುದು. ಇದಕ್ಕೆ ಸಂಪಾದಿಕೆಯರು ಕಿವಿಗೊಡುವರೇ?

ಕಡೆಗೆ "ನಂದಿನಿ"ಯು ಸ್ತ್ರೀಪುರುಷರನ್ನು ಸರಿಯಾಗಿ ಆನಂದಿಸುತ್ತ ಮುಂದಿನ ವರ್ಷವಾದರೂ ಕುಂದಿಲ್ಲದೆ ಪುರುಷರಿಗೆ ಗಂಧದಂತೆಯೂ ಸ್ತ್ರೀಯರಿಗೆ ಚಂದನದಂತೆಯೂ ಶೋಭಿಸುತ್ತ ಎಂದಿನಂತೆ ತನ್ನ ಯಶೋದುಂದುಭಿಯನ್ನು ಆಚಂದ್ರಾರ್ಕವಾಗಿ ಮೊಳಗಿಸಲೆಂದು ಶ್ರೀಕೃಷ್ಣ ಪರಮಾತ್ಮನನ್ನು ಪ್ರಾರ್ಥಿಸುತ್ತಿದ್ದೇವೆ."

× + × × ×

ಸಹೃದಯರಿಂದ ತಮ್ಮ ಅಭಿಪ್ರಾಯನಿವೇದನವನ್ನು ಕಳುಹಿಸು ವ ಈ ನಮ್ಮ ಬಂಧುಗಳಿಗೆ ನಮ್ಮ ಕೃತಜ್ಞತಾ ವಂದನೆಗಳನ್ನು ಒಪ್ಪಿಸುವುದಲ್ಲದೆ, ಸಾಧ್ಯವಾದಷ್ಟುಮಟ್ಟಿಗೂ "ನಂದಿನಿ" ಲೋಕಾದರಕ್ಕೆ ಪಾತ್ರವಾಗುವ ಪ್ರಯತ್ನದಲ್ಲಿರುವುದನ್ನೂ ತಿಳಿಸಲು ಸಂತೋಷಿಸುತ್ತೇವೆ. ಸುಲಭಭಾಷೆ-ಬಹುಮಾನಗಳ ವಿಚಾರದಲ್ಲಿ ಈ ಮೊದಲೇ ನಾವು ಸ್ವಾಭಿಪ್ರಾಯವನ್ನು ನಿವೇದಿಸಿರುವೆವಾದುದರಿಂದ ಆ ವಿಚಾರದಲ್ಲಿ ಇಲ್ಲಿ ಹೆಚ್ಚು ಬರೆಯಬೇಕಾಗಿಲ್ಲ. ನಮ್ಮ ಸೋದರಿಯರು ಸ್ವಸಂತೋಷದಿಂದ ಕಳುಹುವ ಲೇಖನಗಳಿಗೆ ನಾವು ಆತ್ಮಾದರದಿಂದ ಸ್ವಾಗತವನ್ನು ಕೋರಿ ಸಕಾಲದಲ್ಲಿ ಅವನ್ನು ಪ್ರಕಟಿಸುವೆವೆಂದು ಕೂಡ ಭರವಸೆಯನ್ನು ಕೊಡುತ್ತಿರುವೆವು.

ಸಂ. ನಂದಿನಿ

# ಆಳ್ವಾರರ ವೈಭವವು

## ಶ್ರೀ ಯಾಮುನಾಳ್ವಾರರು

"ಆಷಾಢೇ ಚೋತ್ತರಾಷಾಢೆ ಸಂಭೂತಂ ತತ್ಪುರೆ ವೈಪುರೆ|
ಸಿಂಹಾಸನಾಂಶಂ ವಿಖ್ಯಾತಂ ಶ್ರೀಯಾಮುನ ಮುನಿಂ ಭಜೇ||"

ಶ್ರೀಮನ್ನಾಥ ಮುನಿಗಳ ಪುತ್ರರಾದ ಈಶ್ವರ ಮುನಿಗಳಿಗೆ ಕಲಿಯುಗ ೪೦೧೬ನೆ ಧಾತು ಸಂವತ್ಸರ ಆಷಾಢಮಾಸ ಉತ್ತರಾಷಾಢಾ ನಕ್ಷತ್ರದಲ್ಲಿ ಆಳವಂದಾರು ಪುತ್ರರಾಗಿ ಅವತರಿಸಿದರು. ಆಗ ನಾಥಮುನಿಗಳು ತಮ್ಮ ಪೌತ್ರರಿಗೆ "ಯಮುನೆತುರೈವ"ರೆಂದು ಹೆಸರಿಡುವಂತೆ ಈಶ್ವರ ಮುನಿಗೂ, ತಿರ ಮಂತ್ರಾದಿ ವಿಶೇಷಾರ್ಥಗಳನ್ನು ಉಪದೇಶಿಸುವಂತೆ ಉಯ್ಯಕೊಂಡಾರರಿಗೂ, ಯೋಗ ರಹಸ್ಯವನ್ನು ಉಪದೇಶಿಸುವಂತೆ ಕುರುಕಾನಾಥರಿಗೂ ಹೇಳಿ ತಾವು ಯೋಗಾರೂಢರಾದರು. ಉಯ್ಯಕೊಂಡಾರರು ದೇಹದಲ್ಲಿ ಅಶಕ್ತರಾದುದರಿಂದ, "ಅಚಾ

ರ್ಯ ಪೌತ್ರರಿಗೆ ತಿರುಮಂತ್ರಾದಿ ರಹಸ್ಯವನ್ನು ಉಪದೇಶಿಸುವುದಕ್ಕೆ ತನಗೆ ಪ್ರಾಪ್ತಿ ಇಲ್ಲ, ನೀನೇ ಮಾಡಿ"ರೆಂದು ಹೇಳಲು ಅದಕ್ಕೆ ಮಣಕ್ಕಾಲ್ ನಂಬಿಗಳು—"ನನ್ನ ಕೆಲಸವೆಲ್ಲ ತಮ್ಮದೇ ಅಲ್ಲವೆ" ಎಂದು ಉತ್ತರವನ್ನು ಕೊಡಲು ಉಯ್ಯಕೊಂಡಾರರದಕ್ಕೆ ಸಂತೋಷಚಿತ್ತರಾದರು. ಈಶ್ವರ ಮುನಿಗಳು ತಂದೆಯ ಆಜ್ಞೆಯಂತೆ ತಮ್ಮ ಪುತ್ರರಿಗೆ "ಯಮುನೆತುರೈವ"ರೆಂದು ನಾಮಕರಣವನ್ನು ಮಾಡಿ ಜಾತಕರ್ಮ ನಾಮಕರಣ ಚೌಲೋಪನಯನವೇ ಮುಂತಾದ ಕರ್ಮಗಳನ್ನು ಆಯಾಕಾಲಗಳಲ್ಲಿ ಮಾಡಿದರು. ಆಗ ಮಣಕ್ಕಾಲ್‌ನಂಬಿಗಳು ಬಂದು ಚಕ್ರಾಂಕಿತವನ್ನು ಮಾಡಿದರು.

ಹೀಗಿರಲು ಒಂದುದಿನ ನಾಥಮುನಿಗಳು ಸ್ನಾನಮಾಡಿ ಮನೆಗೆ ಬರಲು, ಅವರ ಪುತ್ರಿಯರಿಬ್ಬರೂ ಬಂದು ಅವರನ್ನು ನೋಡಿ "ಅಪ್ಪಾ! ನೀವು ಸ್ನಾನಕ್ಕೆ ಹೋಗಿದ್ದ ಕಾಲದಲ್ಲಿ ಇಬ್ಬರು ಬಿಲ್ಲುಗಾರರು ಒಬ್ಬ ಹೆಂಗಸು ಸಹ ಕೋತಿಯನ್ನು ಹಿಡಿದುಕೊಂಡ ಬಂದು— "ನಾಥಮುನಿಗಳು ಎಲ್ಲಿ," ಎಂದು ಕೇಳಿದರು. ನಾವು "ಸ್ನಾನಕ್ಕೆ ಹೋಗಿರುವರು." ಎಂದು ಹೇಳಲು, "ಅವರು ಬಂದರೆ ನಾವು ಬಂದಿದ್ದುದನ್ನು ಹೇಳಿರಿ." ಎಂದು ಹೊರಟು ಹೋದರು." ಎಂಬುದಾಗಿ ಹೇಳಿದರು. ಆಗ ನಾಥಮುನಿಗಳು ಅವರನ್ನು ಹನುಮತ್ಸಮೇತರಾದ ಸೀತಾರಾಮಲಕ್ಷ್ಮಣರನ್ನಾಗಿ ತಿಳಿದು,—"ನೀವು ಅವರನ್ನು ಕಂಡು ಧನ್ಯರಾದಿರಿ, ನಾವು ಕಾಣಲಿಲ್ಲವಲ್ಲಾ"—ಎಂದು ಹಲುಬುತ್ತ ಅವರು ಹೋದದಿಕ್ಕನ್ನು ವಿಚಾರಿಸಿ ಹೊರಟುಹೋದರು. ಸ್ವಲ್ಪದೂರ ಹೋಗುವದರಲ್ಲಿ ಭಕ್ತಪರಾಧೀನನಾದ ಸ್ವಾಮಿ, ಸೀತಾಲಕ್ಷ್ಮಣರೊಂದಿಗೆ ಪ್ರತ್ಯಕ್ಷನಾದನು. ಆಗ ಅವರು ಸ್ವಾಮಿಯನ್ನು ಸೇವಿಸಿ ಅಲ್ಲಿಯೇ ಪರಮಪದವನ್ನು ಹೊಂದಿದರು.

ಕುರುಕಾನಾಥರು ತಮ್ಮ ಆಚಾರ್ಯರು ಪರಮ ಪದವನ್ನೈದಿದ ಸಮಾಚಾರವನ್ನು ಕೇಳಿ, ಈಶ್ವರಮುನಿಯಿಂದ ಬ್ರಹ್ಮಮೇಧ ಸಂಸ್ಕಾರವನ್ನೂ ಸಾಂವತ್ಸರಕೈಂಕರ್ಯಗಳನ್ನೂ ಮಾಡಿಸಿ, ಗುರುಪುತ್ರರೊಡನೆ ತಾವೂ-ಅಲ್ಲಿಯೇ ಇದ್ದರು. ಉಯ್ಯಕೊಂಡಾರರು, ನಾಥಮುನಿಗಳ

ದೈವಗತಿ ಹೊಂದಿದ ವಾರ್ತೆಯನ್ನು ಕೇಳಿ ವ್ಯಸನಪಟ್ಟು ಅವರಿಗೆ ಶ್ರೀಚೂರ್ಣಪರಿಪಾಲನವನ್ನು ಮಾಡಿ, ಶಿಷ್ಯರಿಗೆ ವಿಶೇಷಾರ್ಥಗಳನ್ನು ಹೇಳುತ್ತಿದ್ದರು. ನಾಥಮುನಿಗಳ ಶಿಷ್ಯರಾದ ತಿರುಕ್ಕಣ್ಣಮಂಗೈಯಾಂಡಾನೆಂಬುವನು ಸ್ವಾಮಿಗೆ ಪುಷ್ಪ ಕೈಂಕರ್ಯ ಮಾಡುತ್ತಿರುವಾಗ ಇಬ್ಬರು ಶೂದ್ರರು ತಮ್ಮ ನಾಯಿಗಳಿಗೋಸ್ಕರ ಜಗಳವಾಡಿ ಸತ್ತು ಹೋದುದನ್ನು ನೋಡಿ ಅಪ್ರಾಕೃತ ನಿತ್ಯ ಸಂಬಂಧಿಯಾದ ಸರ್ವೇಶ್ವರನಿರುವಲ್ಲಿ ಶರಣಾಗತರಾಗಿರುವ ನಾವು ಮಾಡತಕ್ಕುದೇನೂ ಇಲ್ಲವೆಂದೂ ನಿದ್ರಾಹಾರಗಳಿಲ್ಲದ ಮೇಲೆ ಸಂಧ್ಯಾದಿ ನಿತ್ಯಕರ್ಮಗಳೂ ಇಲ್ಲವೆಂದೂ ನಿರಂತರದಲ್ಲಿಯೂ ಭಗವತ್‌ಧ್ಯಾನದಿಂದ ಮೋಕ್ಷವನ್ನು ಹೊಂದಿದರು.

ಉಯ್ಯಕೊಂಡಾರರು ಆ ಸಮಾಚಾರವನ್ನು ಕೇಳಿ ನಮ್ಮ ನಾಥಮುನಿಗಳಿಗಿಂತಲೂ ಅಧಿಕರಾದರೆಂದು ಹೇಳಿ ತಾವೂ ಪರಮ ಪದವನೈದಿದರು. ಅನಂತರ ಮಣಕ್ಕಾಲ್ ನಂಬಿಗಳು ಅವರಿಗೆ ಚರಮ ಕೈಂಕರ್ಯವನ್ನು ಮಾಡಿ ತಮ್ಮ ಶಿಷ್ಯರುಗಳಿಗೆ ವೇದಾಂತವನ್ನು ಬೋಧಿಸುತ್ತಿದ್ದರು. ಈಶ್ವರ ಮುನಿಗಳು ತಮ್ಮ ಪುತ್ರರಿಗೆ ವಿವಾಹವನ್ನು ಮಾಡಿ ತಾವೂ ವಿಷ್ಣುಪದವನ್ನು ಹೊಂದಿದರು.

ಅನಂತರ "ಯಮುನೆ ತುರೈವರು" ತಮ್ಮ ತಂದೆಗೆ ಪಿತೃಕೈಂಕರ್ಯವನ್ನು ಮಾಡಿ, ಮಹಾಭಾಷ್ಯ ಭಟ್ಟರೆಂಬವರಲ್ಲಿ ಶಾಸ್ತ್ರಾಭ್ಯಾಸವನ್ನು ಮಾಡುತ್ತಿದ್ದರು. ಆಗ ಆಸ್ಥಾನ ಪಂಡಿತನಾದ ಆಕ್ಕಿ-ಆಳ್ವಾನೆಂಬವನು ಎಲ್ಲಾ ವಿದ್ವಾಂಸರಿಂದಲೂ ಕಪ್ಪವನ್ನು ತೆಗೆದುಕೊಳ್ಳುತ್ತಿದ್ದನು. ಮಹಾಭಾಷ್ಯ ಭಟ್ಟನು ಆಕ್ಕಿ ಆಳ್ವಾನನ ಸೇವಕರಿಂದ ಪೀಡಿತನಾಗಿ ಕಪ್ಪವನ್ನು ಕೊಡಲು ಹಣವಿಲ್ಲದೆ ಯೋಚಿಸುತ್ತಿದ್ದನು. ಯಾಮುನಾಚಾರ್ಯರು ಸಂಗತಿಯನ್ನು ಅರಿತು "ನವಯಂ ಕವಯಸ್ತು ನವಯಂ ಕೇವಲ ತಂತ್ರಪಾರಗಾಃ। ಅಪಿತು ಪ್ರತಿವಾದಿವಾರಣ ಪ್ರಕಟಾಟೋಪ ವಿಪಾಟನಕ್ಷಮಾಃ॥ ಎಂಬ ಶ್ಲೋಕವನ್ನು ಬರೆದು ಸೇವಕರ ಕೈಯ್ಯಲ್ಲಿ ಕೊಟ್ಟು ಕಳುಹಿದರು. ಆಕ್ಕಿ ಆಳ್ವಾನನದನ್ನು ನೋಡಿ

ಯಾಮುನಾಚಾರ್ಯರ ಪತ್ರವನ್ನು ಧೊರೆಗೆ ತೋರಿಸಲು, ಆತನು ಆಚಾರ್ಯರನ್ನು ಕರೆತರುವಂತೆ ಸೇವಕರಿಗೆ ಆಜ್ಞಾಪಿಸಿದನು. ಯಮುನೆತುರೈವರು ರಾಜಶಾಸನಕ್ಕೆ ಭಯಪಡದೆ ಬರುವದಿಲ್ಲವೆಂದು ಹೇಳಿ ಕಳುಹಿದರು. ಧೊರೆಯು ತನ್ನ ಅಪ್ಪಣೆಯು ನಡೆಯದುದರಿಂದ ಕೋಪಿತನಾಗಿರಲದನ್ನು ರಾಜಪತ್ನಿಯಾದ ತಿರುವರಂಗ ಕಮ್ಮೆ ಎಂಬಾಕೆ ತಿಳಿದು 'ಪಂಡಿತರಾದವರು ಮರ್ಯಾದೆಯಿಂದ ಕರೆದರೆ ಬರುವರೇ ಹೊರತು; ಸೇವಕನ ಮೂಲಕ ಹೇಳಿ ಕಳುಹಿದರೆ ಬರಲಾರರೆಂದಳು.

ಧೊರೆಯು ಬ್ರಾಹ್ಮಣ ಪ್ರಿಯನಾದುದರಿಂದ ಪತ್ನಿಯ ಮಾತಿನಂತೆ ಕೊಂಬು, ಕಹಳೆ, ಮೊದಲಾದ ವಾದ್ಯಗಳೊಡನೆ ಪಲ್ಲಕ್ಕಿಯನ್ನು ಕಳುಹಿದನು. ಯಾಮುನಾಚಾರ್ಯರು ಪಲ್ಲಕ್ಕಿಯನ್ನೇರಿ ರಾಜಸಭೆಗೆ ಬಂದು—

'ಆ ಶೈಲಾದದ್ರಿ ಕನ್ಯಾ ಚರಣಕಿಸಲಯ ನ್ಯಾಸ ಧನ್ಯೋಪಕಂಠಾ ದಾರಕ್ಷೋನೀತ ಸೀತಾ ಮುಖಕಮಲ ಸಮುಲ್ಲಾಸ ಹೇತೋಶ್ಚಸೇತೋಃ। ಆಚ ಪ್ರಾಚ್ಯಪ್ರತೀಚ್ಯ ಕ್ಷಿತಿಧರಯುಗಳಾದರ್ಕ ಚಂದ್ರಾವತಂಸಾತ್। ಮೀಮಾಂಸಾ ಶಾಸ್ತ್ರಯುಗ್ಮಶ್ರಮವಿಮಲ ಮನಾಮೃಗ್ಯತಾಂ ಮಾದೃಶೋನ್ಯಃ॥ '— ಎಂದರೆ

ಆಸೇತು ಹಿಮಾಚಲ ಪರ್ಯಂತರ ಎಲ್ಲೆಲ್ಲಿ ಹುಡುಕಿದರೂ ಮೀಮಾಂಸಾದಿ ಶಾಸ್ತ್ರಗಳಲ್ಲಿ ನನ್ನಂತೆ ಚತುರನಾದವನು ಕಾಣುವದಿಲ್ಲವೆಂಬ ಅರ್ಥವುಳ್ಳ ಶ್ಲೋಕವನ್ನು ಬರೆದು ಮುಂದಿಟ್ಟರು. ಆಕ್ಕಿಆಳ್ವಾನದನ್ನು ನೋಡಿ ಕೋಪಗೊಂಡು ಇವರೊಡನೆ ತರ್ಕವನ್ನು ಮಾಡಬೇಕೆನಲು, ಧೊರೆಯು ಆ ಸಂಗತಿಯನ್ನು ಯಮುನೆತುರೈವರಿಗೆ ಹೇಳಿದರು. ಅದಕ್ಕವರು ಹತ್ತುಮಂದಿ ವಿದ್ವಾಂಸರ ಇದಿರಿಗಾದರೆ ವಾದವನ್ನು ಮಾಡುವೆವೆನಲು ಧೊರೆಯು ಅದೇ ಪ್ರಕಾರ ವಿದ್ವಾಂಸರ ಗೋಷ್ಠಿಯನ್ನು ಸೇರಿಸಿದನು. ಆಗ ರಾಜಪತ್ನಿಯು ಪತಿಯನ್ನು ಕುರಿತು—

'ಹಿಂದೆ ನಮ್ಮಿಬ್ಬರಿಗೂ ಶೈವ-ವೈಷ್ಣವ ಮತಗಳ ವಿಷಯದಲ್ಲಿ ಚರ್ಚೆ ಬಂದಾಗ ನಾನು ಮಾಡಿದ ಪ್ರತಿಜ್ಞೆಗೆ ಭಗವದನುಗ್ರಹವ

ಪ್ರಾಪ್ತವಾದುದರಿಂದ ಯಮುನೆತುರೈವರು ಬಂದಿರುವರು. ಇವರಿಬ್ಬ ರಲ್ಲಿ ಜಯಿಸಿದವರಿಗೆ ಮರ್ಯಾದೆಯೇನುಮಾಡುವದು—' ಎಂದು ಕೇಳಲು ಧೊರೆಯು–'ಗೆದ್ದವರಿಗೆ ನನ್ನ ಅರ್ಧ ರಾಜ್ಯವನ್ನು ಕೊಡು ವುದಲ್ಲದೆ, ಸೋತವರು ಗೆದ್ದವರಿಗೆ ಊಳಿಗವನ್ನು ಮಾಡಬೇಕೆಂದನು. ಅನಂತರ ಅಕ್ಕಿ ಆಳ್ವಾನು ಯಮುನೆ ತುರೈವರನ್ನು ನೋಡಿ, ನಿಮ್ಮ ಸ ದ್ವಾದವನ್ನು ದುರ್ವಾದವನ್ನಾಗಿಯೂ, ದುರ್ವಾದವನ್ನು ಸದ್ವಾದವ ನ್ನಾಗಿಯೂ ಮಾಡುವೆನೆಂದು ಹೇಳಲು ಅವರು ನಗುತ್ತ ಹೀಗೆ ಹೇಳಿ ದರು—

"ರಾಜಾಯಂ ಸಾರ್ವಭೌಮಃ, ರಾಜಪತ್ನೀಯಂ ಪತಿವ್ರತಾ। ತ್ವನ್ಮಾತಾ ನವಂಧ್ಯಾ" (ಈ ರಾಜನು ಸಾರ್ವಭೌಮನು, ರಾಜಪತ್ನಿ, ಪತಿವ್ರತೆ, ನಿನ್ನ ತಾಯಿ–ವಂಧ್ಯೆಯಲ್ಲ-ಎಂದು ಭಾವವು).

ಅಕ್ಕೀ ಆಳ್ವಾನು ಪ್ರತ್ಯುತ್ತರವನ್ನು ಕೊಡಲಾರದೆ ತಲೆಯನ್ನು ಬಗ್ಗಿಸಿಕೊಂಡಿದ್ದನು. ಮತ್ತು ಯಾಮುನಾರ್ಯರು ವೇದಾಂತದಲ್ಲಿ ಯೂ ಅರ್ಥವಿಚಾರಾದಿ ಶಾಸ್ತ್ರಗಳಲ್ಲಿಯೂ ವಾದವನ್ನು ಮಾಡಿ ಅಕ್ಕಿ ಆಳ್ವಾನನ್ನು ಜಯಿಸಲು ರಾಜಪತ್ನಿಯು ಸಂತೋಷದಿಂದ ತನ್ನನ್ನು "ಆಳಲು ಬಂದಿರಿ" ಎಂದು ಹೇಳಿ ಅವರಿಗೆ ಶರಣಾಗತಳಾಗಿ, ಅವ ರನ್ನು ಕರೆದುಕೊಂಡು ಧೊರೆಯೊಡನೆ ಉಪ್ಪರಿಗೆಯನ್ನು ಸೇರಿದಳು. ಆ ಬಳಿಕ ಧೊರೆಯು ತನ್ನ ಅರ್ಧರಾಜ್ಯವನ್ನಿತ್ತು "ಆಳವಂದಾರೆಂ" ಬ ಹೆಸರನ್ನು ಕೊಟ್ಟು ಅಕ್ಕಿ ಆಳ್ವಾನನ್ನು ಊಳಿಗ ಮಾಡುವಂತೆ ಹೇ ಳಿದನು. ಆಳವಂದಾರರು ಪ್ರಸಿದ್ಧ ವಿದ್ವಾಂಸನಾದ ವೃದ್ಧನ ಕೈಯಿಂದ ಊಳಿಗವನ್ನು ಮಾಡಿಸಿಕೊಳ್ಳಲು ಒಪ್ಪಲಿಲ್ಲ. ಮತ್ತು ಪತ್ನೀಸಮೇತ ರಾಗಿ ಪಾಂಡಿತ್ಯದಿಂದ ಸಂಪಾದಿಸಿದ ರಾಜ್ಯದಲ್ಲಿ ರಾಜಭೋಗಗಳ ನ್ನು ಅನುಭವಿಸುತ್ತ ಸುಖದಿಂದಿದ್ದರು. ಹೀಗಿರಲು, ಸ್ವಲ್ಪದಿವಸಗ ಳಲ್ಲಿಯೇ ಇವರಿಗೆ ಶೊಟ್ಟನಂಬಿ, ಕೆಯುವತ್ತಾಳ್ಕರಶುನಂಬಿ, ಪಿಳ್ಳೆಯ ರಶುನಂಬಿ, ತಿರುವರಂಗಪ್ಪೆರುಮಾಳ್—ಎಂಬ ನಾಲ್ಕುಜನ ಗಂಡುಮ ಕ್ಕಳಾದರು. ಈ ಸಂಗತಿಯೆಲ್ಲವನ್ನು ಮಣಕ್ಕಾಲ್ ನಂಬಿಗಳು ಕೇಳಿ ಆಳವಂದಾರನ್ನು ನೋಡಬೇಕೆಂದು ಬಂದು ಕಾವಲುಗಾರರಿಂದ ತಡೆ

ಯಲ್ಪಟ್ಟವರಾಗಿ ಹಿಂದುರಿಗಿ ಬಂದು ಆ ಪ್ಪೂರಿನಲ್ಲಿಯೇ ನೆಲಸಿ, ಆಳವಂದಾರರ ಬಾಣಸಿಗರವನನ್ನು ಸ್ನೇಹಮಾಡಿಕೊಂಡು, ಅವನಿಂದ ಅವರಿಗೆ ಕೂಥವಾಳಾಂಕೀರೆಯು ಇಷ್ಟವೆಂದರಿತು ಅದನ್ನು ದಿನವೂ ತಪ್ಪದೆ ತಂದುಕೊಡುತ್ತಿದ್ದರು. ಆರು ತಿಂಗಳಾದರೂ ಸೊಪ್ಪನ್ನು ತಂದು ಕೊಡುವವರಾರೆಂಬ ವಿಚಾರವೇ ಬರಲಿಲ್ಲ. ಅಡಿಗೆಯವರಿಗೆ ನಂಬಿಗಳ ಸ್ವರೂಪವು ತಿಳಿಯದುದರಿಂದ ಯಾರೋ ಆಶ್ರಿತರೆಂದು ಸುಮ್ಮನೇ ಇದ್ದರು. ಈ ಪ್ರಕಾರ ನಂಬಿಗಳು ಪ್ರತಿದಿನವೂ ಸೊಪ್ಪನ್ನು ತಂದು ಕೊಡುತ್ತಲಿದ್ದು ಒಂದುದಿನ ತಪ್ಪಲು, ಆಳವಂದಾರು ಈ ದಿನ ಕೂಥವಳ್ಳೆಯನ್ನು ಏಕೆ ಮಾಡಲಿಲ್ಲವೆಂದು ಕೇಳಿದರು. ಪಾಚಕನು ಅದಕ್ಕೆ ಆರುತಿಂಗಳಿಂದಲೂ ಓರ್ವ ಶ್ರೀವೈಷ್ಣವ ಬ್ರಾಹ್ಮಣನು ತಪ್ಪದೆ ತಂದು ಕೊಡುತ್ತಿದ್ದನು; ಈದಿನವಾತನು ಆವ ಕಾರಣದಿಂದಲೋ ತಪ್ಪಿದನೆಂದನು. ಆಳವಂದಾರರದನ್ನು ಕೇಳಿ ನಾಳೆಯಾಬ್ರಾಹ್ಮಣನು ಬಂದರೆ ನನಗೆ ತಿಳಿಸೆಂದು ಹೇಳಿದರು. ಮರುದಿನ ಸೊಪ್ಪನ್ನು ತೆಗೆದುಕೊಂಡು ಮಣಕ್ಕಾಲ್ ನಂಬಿಗಳು ಬರಲು ಆಳವಂದಾರರು ಬಂದು ನಮಸ್ಕರಿಸಿ, ಅವರಿಗೆ ಪೀಠವನ್ನಿತ್ತು ನಿಮಗೆ ಬೇಕಾದುದನ್ನು ಬೇಡಬಹುದೆಂದರು. ಮಣಕ್ಕಾಲ್ ನಂಬಿಗಳು ನನಗೆ ಬೇಕಾದುದೇನೂ ಇಲ್ಲ; ನಿಮ್ಮ ಪಿತಾಮಹರು ನನ್ನಲ್ಲಿ ನಿಕ್ಷೇಪವಾಗಿಟ್ಟಿದ್ದ ವಸ್ತುವನ್ನು ನಿಮಗೆ ಕೊಡಲು ಬಂದಿರುವೆನು. ಅದನ್ನು ತೆಗೆದುಕೊಳ್ಳುವುದಕ್ಕೆ ಸ್ವಲ್ಪದೂರ ಹೋಗಬೇಕು ಅದಕ್ಕೆ ಸಕಾಲವು ಒದಗುವವರೆಗೆ ತಮ್ಮ ಸಮೀಪಕ್ಕೆ ಬರುವಂತೆ ನನಗೆ ಅವಕಾಶವನ್ನು ಕೊಡಬೇಕೆಂದು ಕೇಳಿದರು. ಆಳವಂದಾರರು ಅವರು ಹೇಳಿದಂತೆಯೇ ನಡೆನುಕೊಂಡರು. ನಂಬಿಗಳು ಅಂದಿನಿಂದ ಹದಿನೆಂಟು ದಿವಸಗಳವರೆಗೂ ಭಗವದ್ಗೀತೆಯನ್ನು ಉಪದೇಶಿಸಲು ಅವರಿಗೆ ಅದರಲ್ಲಿ ದಿನದಿನಕ್ಕೂ ಅಭಿರುಚಿ ಹೆಚ್ಚಿ. 'ಆ ವಸ್ತುವನ್ನು ಸಾಕ್ಷಾತ್ಕರಿಸಲು ಅಗುವದಿಲ್ಲವೆ' ಎಂದರು. ಮಣಕ್ಕಾಲ್ ನಂಬಿಗಳು ಅವರ ಭಕ್ತಿಗೆ ಮೆಚ್ಚಿ ಚರಮ ಶ್ಲೋಕಾರ್ಥವನ್ನು ಉಪದೇಶಿಸಿ. ನಿವೃತ್ತ ಸಂಸಾರಾಭಿಲಾಷೆಯುಳ್ಳ ಆಳವಂದಾರರನ್ನು ನಿಮ್ಮ ಪಿತಾಮಹರಿಟ್ಟಿರುವ ಧನವನ್ನು ತೋರಿಸುವೆನೆಂದು—ಕರೆದು

ಕೊಂಡು ಬಂದು, ಕಾವೇರಿಯಲ್ಲಿ ಸ್ನಾನಮಾಡಿ ಸ್ವಾಮಿಯ ಸನ್ನಿಧಿಯಲ್ಲಿ ಶ್ರೀರಂಗನಾಥನೇ ನಿಮ್ಮ ಪಿತಾಮಹನ ಧನವು ಎಂದು ತೋರಿಸಿದರು. ಆಳವಂದಾರರು ಶ್ರೀರಂಗನಾಥನನ್ನು ಪಾದಾದಿಕಿರೀಟ ಪರ್ಯಂತವೂ ಸೇವಿಸಿ, ಸಂತುಷ್ಟರಾಗಿ ಮಣಕ್ಕಾಲ್ ನಂಬಿಗಳನ್ನು ಮುಂಚೆಯೇ ನಿಶ್ಚಯಿಸಿದ್ದ ಆಚಾರ್ಯರಾಗಿ ತಿಳಿದು, ತಮ್ಮ ನಾಲ್ವರು ಪುತ್ರರನ್ನೂ ಅವರ ತಿರುವಡಿಗಳಲ್ಲಿ ಆಶ್ರಯಿಸುವಂತೆ ಹೇಳಿ ತಾವು ರಂಗೇಶನಲ್ಲಿ ಆತ್ಮಸಮರ್ಪಣವನ್ನು ಮಾಡಿಕೊಂಡರು. ಮತ್ತು ಪ್ರಾಣಿಗಳ ಉಜ್ಜೀವನಾರ್ಥವಾಗಿ ಶ್ರೀ ಪ್ರಪದನವಾದ ಚತುಶ್ಶ್ಲೋಕಿ-ಎಂಬ ಸ್ತೋತ್ರವನ್ನು ಭಗವತ್ಪ್ರಪದನವಾದ ಸ್ತೋತ್ರರತ್ನವನ್ನು ಆಗಮಪ್ರಾಮಾಣ್ಯತೆಯನ್ನು ಆತ್ಮಸಿದ್ಧಿ ಸಂವಿತ್ಸಿದ್ಧಿ ಎನ್ನುವ ಸಿದ್ಧಿತ್ರಯವನ್ನೂ ಗೀತಾರ್ಥ ಸಂಗ್ರಹವನ್ನೂ ರಚಿಸಿ, ತಾವು ತುರ್ಯಾಶ್ರಮವನ್ನು ಸ್ವೀಕರಿಸಿದರು. ಮತ್ತು ತಮ್ಮ ಸಕಲೈಶ್ವರ್ಯವನ್ನೂ ಶ್ರೀರಂಗನಾಥನ ಕೈಂಕರ್ಯಕ್ಕೆ ಸಮರ್ಪಿಸಿದರು.

ಆಗ ಆಳವಂದಾರಿಗೆ ಪೆರಿಯನಂಬಿ, ತಿರುಕೋಟ್ಟೂರನಂಬಿ, ಆಳವಂದಾರಾಳ್ವಾರ್, ಪೆರಿಯ ತಿರುಮಲೆನಂಬಿ, ತಿರುಮಲೆಯಾಂಡಾನ್, ತೆಯ್ವವಾರಿಯಾಂಡಾನ್, ವಾನಮಾಮಲೆಯಾಂಡಾರ್, ಈಶಾಂಡಾನ್, ತಿರುಮೋಹೂರಪ್ಪನ್, ತಿರುಮೋಹೂರ್‌ನಿನ್ರಾನ್, ತೆಯ್ವಪೆರುಮಾಳ್, ಮಾರನೇರಿನಂಬಿ, ತಿರುಕ್ಕುರುಹೂರ್ ದಾಸರ್, ಇಂಗಚ್ಚಿಳಾಂಡಾನ್, ರಾಜಪತ್ನಿಯಾದ ತಿರುವರಂಗತಮ್ಮೈ, ತಿರುಕ್ಕಚ್ಚಿನಂಬಿ, ಗಳೆಂಬ ಈ ಹದಿನೇಳುಮಂದಿ ಶಿಷ್ಯರಾದರು ಮಣಕ್ಕಾಲ್ ನಂಬಿಗಳು ಆಳವಂದಾರರ ಜ್ಞಾನ-ಭಕ್ತಿಗಳನ್ನು ನೋಡಿ ಸಂತಸಗೊಂಡು, ಅವರನ್ನು ಕುರಿತು ಕುರುಕಾನಾಥರಲ್ಲಿ-ಒಂದು ರಹಸ್ಯವನ್ನು ನಿಮಗೆ ಉಪದೇಶಿಸುವಂತೆ ನಾಥಮುನಿಗಳು ಹೇಳಿರುವರು ಆದ್ದರಿಂದ ನೀವು ಅಲ್ಲಿಗೆ ಹೋಗಿ ಅದನ್ನು ಗ್ರಹಿಸಬೇಕೆಂದು ಹೇಳಲು, ಅವರು ಅತ್ಯಂತ ವಿನಯದಿಂದ ತಮ್ಮ ಅಪ್ಪಣೆಯೇ ನನಗೆ ಮುಖ್ಯವೆಂದರು.

ಆ ನಂತರ ಮಣಕ್ಕಾಲ್ ನಂಬಿಗಳು ಆಳವಂದಾರನ್ನು ನೋಡಿ

ನಿಮ್ಮಹಾಗೆ ಒಬ್ಬ ದರ್ಶನ ಪ್ರವರ್ತಕರನ್ನು ನಿಮ್ಮ ಸ್ಥಾನಕ್ಕೆ ಏರ್ಪಡಿಸುವುದೆಂದು ಹೇಳಿ ತಾವು ಆಚಾರ್ಯರ ತಿರುವಡಿಗಳನ್ನು ನೆನೆಯುತ ಪರಮಪದವನ್ನೈದಿದರು.

ಆಳವಂದಾರರು, ಆಚಾರ್ಯವಿಯೋಗದಿಂದ ನೊಂದು, ಅವರಿಗೆ ಶ್ರೀಚೂರ್ಣಪರಿಪಾಲನವನ್ನು ಮಾಡಿ, ಶಿಷ್ಯರ ಸಮೇತರಾಗಿ ವೀರನಾರಾಯಣಪುರಕ್ಕೆ ಹೋಗಿ ಅಲ್ಲಿ ಕುರುಕಾನಾಥರು ಯೋಗದಲ್ಲಿರಲು, ಯೋಗಭಂಗವಾದೀತೆಂಬ ಭಯದಿಂದ ಮರೆಯಾಗಿ ನಿಂತರು. ಆಗ ಕುರುಕಾನಾಥರು-ಕೊಟ್ಟಕುಲದವರಾರು ಎನಲು — ಆಳವಂದಾರರು ದಾಸನಾದ ನಾನು ಯಮುನೆ ತುರೈವನು. ತಮಗೆ ಯೋಗಭಂಗವಾದೀತೆಂದು ಗೋಡೆಯ ಹಿಂದೆ ನಿಂತಿದ್ದ ನನ್ನನ್ನು ಅರಿತ ಬಗೆಹೇಗೆ— ಎಂದರು. ನಾಥರು—ನಮ್ಮ ಕೃಷ್ಣನು ಕೊಟ್ಟಕುಲದ ದೈವವಾದುದರಿಂದ ಕುಲದವನನ್ನು ಹಿಂತಿರುಗಿ ನೋಡಿದುದರಿಂದ ತಿಳಿದೆನೆನಲು, ಆಳವಂದಾರರು, ಆ ಯೋಗರಹಸ್ಯವನ್ನು ನನಗೆ ದಯೆಮಾಡಿ ತಿಳುಹಬೇಕೆಂದು ಪ್ರಾರ್ಥಿಸಿದರು. ಕುರುಕಾನಾಥರು ನನ್ನ ದೇಹಾವಸಾನದಲ್ಲಿ ಅದನ್ನು ನಿಮಗೆ ತಿಳಿಸುವೆನು. ಅದು ಬರುವ ಪುಷ್ಯಮಾಸ, ಪುಷ್ಯಯೋಗ, ಅಭಿಜಿನ್ಮುಹೂರ್ತದಲ್ಲಿ ಉಂಟಾಗುವುದೆಂದು ಹೇಳಿ ಶ್ರೀಮುಖವನ್ನು ಕೊಟ್ಟು ಕಳುಹಿದರು.

ಆಳವಂದಾರರು ಶ್ರೀರಂಗಕ್ಕೆ ಬಂದು ಅಲ್ಲಿ ಅಧ್ಯಯನೋತ್ಸವದಲ್ಲಿ ಅವರ ಪುತ್ರರಾದ ವರರಂಗರು ಅನಂತಶಯನದ ವೈಭವವನ್ನು ಕುರಿತು ಹಾಡಲು ಕೇಳಿ, ಪುಳುಕಾಂಕಿತರಾಗಿ ಅನಂತಶಯನಕ್ಕೆ ಬಂದು, ಸ್ವಾಮಿಯನ್ನು ಸೇವಿಸಿ, ಬಿಟ್ಟು ಬರಲಾರದೆ ಅಲ್ಲಿಯೇ ಕೆಲವು ದಿನಗಳಿದ್ದರು. ಆನಂತರ ಕುರುಕಾನಾಥರು ಕೊಟ್ಟಿದ್ದ ಶ್ರೀಮುಖವನ್ನು ಬಿಚ್ಚಿ ನೋಡಲು ಕಾಲವು ಅತಿಕ್ರಮಿಸಿದ್ದುದರಿಂದ ವ್ಯಸನಪಟ್ಟು ಆಚಾರ್ಯ ನಿಯಮನವೇ ಮುಖ್ಯ ಕೈಂಕರ್ಯವೆಂದು ತಮ್ಮ ಸ್ಥಾನಕ್ಕೆ ಮತ್ತೊಬ್ಬನುಂಟಾಗಬೇಕೆಂದು ಭಗವಂತನಲ್ಲಿ ಪ್ರಾರ್ಥಿಸುತ್ತಿದ್ದರು.

ಆಳವಂದಾರರು ತಿರುವಾಯಿಮೊಳಿಗೆ ಅರ್ಥವನ್ನು ಹೇಳುತ್ತಿರುವಾಗ, ಒಳವಿಲ್‌ಕಾಲಮೆಲ್ಲಾಂ—ಎನ್ನುವ ತಿರುವಾಯಿಮೊಳಿಯ

ಅರ್ಥವನ್ನು ಪೆರಿಯ ತಿರುಮಲೆನಂಬಿಗಳು ಕೇಳಿ ತಿರುಪದಿಗೆ ಹೋಗ ಬೇಕೆಂದು ಯತ್ನಿಸಲು ಅದನ್ನು ಆಳವಂದಾರರು ನೋಡಿ ಈ ಅರ್ಥಗಳೆಲ್ಲವನ್ನು ಮನಸ್ಸಿನಲ್ಲಿ ಚನ್ನಾಗಿ ಅರಿತ ಹೊರತು, ಈ ವಿಧವಾದ ಆಶೆಯು ಇವರಿಗೆ ಹುಟ್ಟದು. ಎಲ್ಲವೂ ದೈವಚಿತ್ತವೆಂದು ಅವರಿಗೆ ತಮ್ಮ ಶ್ರೀಪಾದ ತೀರ್ಥವನ್ನು ಕೊಟ್ಟರು. ಅನಂತರ ತಿರುಮಲೆನಂಬಿಗಳು ತಮ್ಮ ತಂದೆಯಾದ ಕುಕ್ಕರಶುನಂಬಿಯನ್ನೂ ತಮ್ಮ ಸಹೋದರಿಗಳಿಬ್ಬರನ್ನೂ ಕರೆದುಕೊಂಡು ತಿರುಪದಿಯಲ್ಲಿ ನೆಲಸಿ, ಶ್ರೀ ವೆಂಕಟೇಶ್ವರ ಸ್ವಾಮಿಗೆ ಕೈಂಕರ್ಯವನ್ನು ಮಾಡುತ್ತಿದ್ದರು. ಆಗ ಅಲ್ಲಿಗೆ, ಪೆರಂಬುದೂರು ಅಸೂರಿ ಕೇಶವಪ್ಪೆರುಮಾಳು, ಮಧುರ ಮಂಡಲಾ ಕಮಲನಯನಭಟ್ಟರು-ಎಂಬಿಬ್ಬರು ಬಂದು ತಿರುಮಲೆನಂಬಿಗಳ ಸಹೋದರಿಯರನ್ನು ವಿವಾಹಾರ್ಥವಾಗಿ ಕೇಳಲು ಅವರು ಇಬ್ಬರಿಗೂ ಪಂಚಸಂಸ್ಕಾರಗಳನ್ನು ಮಾಡಿ, ಕೇಶವ ಭಟ್ಟರಿಗೆ ಕಾಂತಿಮತಿಯೆಂಬವಳನ್ನೂ ಕಮಲನಯನ ಭಟ್ಟರಿಗೆ ದ್ಯುತಿಮತಿಯೆಂಬುವಳನ್ನೂ ಕೊಟ್ಟು ವಿವಾಹವನ್ನು ಬೆಳೆಯಿಸಿ ಸತ್ಪುತ್ರರಾಗುವಂತೆ ಆಶಿರ್ವದಿಸಿ ಕಳುಹಿ ಕೊಟ್ಟು ತಾವು ಸ್ವಾಮಿಯ ಸೇವೆಯಲ್ಲಿ ನಿರತರಾಗಿದ್ದರು.



ಶ್ರೀ

ಶ್ರೀಮತೇ ರಾಮಾನುಜಾಯನಮಃ

(ಆಳ್ವಾರರ ವೈಭವ)

" ಚೈತ್ರಾರ್ದ್ರಾಸಂಭವಂ ವಿಷ್ಣೋರ್ದ್ದರ್ಶನಸ್ಥಾಪನೋತ್ಸುಕಂ।
ತುಂಡೀರಮಂಡಲೇ ಶೇಷ ಮೂರ್ತಿಂ ರಾಮಾನುಜಂ ಭಜೇ ॥ "

# ರಾಮಾನುಜಾಚಾರ್ಯರು.



"ಭೂತಪುರಿ" ಎಂಬ ಶ್ರೀ ಪೆರಂಬದೂರಿನಲ್ಲಿ ಹಾರೀತ ಗೋತ್ರ ಶ್ರೀವೈಷ್ಣವರಾದ ಕೇಶವ ಸೋಮಯಾಜಿಗಳಿಗೆ ಕಲಿಯುಗ ೪೧೧೮ ನೇ ಪಿಂಗಳ ಸಂವತ್ಸರ ಚೈತ್ರಮಾಸ ಆರಿದ್ರಾ ನಕ್ಷತ್ರದಲ್ಲಿ ರಾಮಾನುಜಾಚಾರ್ಯರು ಪುತ್ರರಾಗಿ ಅವತರಿಸಿದರು. ಈ ಸಂಗತಿಯನ್ನು ತಿರುಮಲೆನಂಬಿಗಳು ಕೇಳಿ ಬಂದು ತಮ್ಮ ಸೋದರಿಯ ಶಿಶುವನ್ನು ನೋಡಿ ಸಂತೋಷಪಟ್ಟು "ರಾಮಾನುಜ"ನೆಂದು ಹೆಸರನ್ನಿರಿಸಿ, ರಕ್ಷಾರ್ಥವಾಗಿ ಶಂಖ ಚಕ್ರಾಂಕಿತವನ್ನು ಮಾಡಿ ತಾವು ತಿರುಪದಿಗೆ ದಯಮಾಡಿಸಿದರು. ಕೇಶವ ಸೋಮಯಾಜಿಗಳು ಶಿಶುವಿಗೆ ಜಾತಕರ್ಮ ನಾಮಕರಣವೇ ಮೊದಲಾದ ಕರ್ಮಗಳನ್ನು ಮಾಡಿ ಉಪನಯನಾನಂತರ ಸಾಂಗವಾಗಿ ವೇದಾಧ್ಯಯನವನ್ನು ಮಾಡಿಸಿದರು. ರಾಮಾನುಜರು, ಷೋಡಶ ವಯಸ್ಕರಾಗುತಲೆ ಗೃಹಸ್ಥಾಶ್ರಮವನ್ನು ಅಂಗೀಕರಿಸಿ, ಕಂಚಿಯಲ್ಲಿ ಯಾದವ ಪ್ರಕಾಶನೆಂಬ ಒಬ್ಬ ಏಕದಂಡ ಸನ್ಯಾಸಿಯ ಬಳಿಯಲ್ಲಿ ಶಾಸ್ತ್ರಾಭ್ಯಾಸ ಮಾಡುತ್ತಿದ್ದರು.

ಮಧುರ ಮಂಗಲದ ಕಮಲನಯನ ಭಟ್ಟನಿಗೆ ಕ್ರೋಧನ ಸಂವತ್ಸರ ಮಕರಮಾಸ, ಪೂರ್ಣಿಮಾ ಸೋಮವಾರ ಪುನರ್ವಸು ನಕ್ಷತ್ರದಲ್ಲಿ ಒಬ್ಬ ಪುತ್ರರು ಹುಟ್ಟಿದರು. ಪೆರಿಯ ತಿರುಮಲೆನಂಬಿಗಳು ಬಂದು ಗೋವಿಂದ ಪೆರುಮಾಳೆಂದು ಹೆಸರಿಟ್ಟು ಹೊರಟುಹೋದರು. ಅವರೂ ಉಪನಯನಾನಂತರ ವೇದಾಧ್ಯಯನವನ್ನು ಮಾಡಿ ಷೋಡಶ ವರ್ಷಾನಂತರ ಗ್ರಹಸ್ಥಾಶ್ರಮಿಗಳಾಗಿ ಯಾದವ ಪ್ರಕಾಶದಲ್ಲಿಯೇ

ಶಾಸ್ತ್ರಾಭ್ಯಾಸವನ್ನು ಮಾಡುತ್ತಿದ್ದರು. ಯಾದವ ಪ್ರಕಾಶನು, "ಸತ್ಯಂ ಜ್ಞಾನಮನಂತಂಬ್ರಹ್ಮ" ಎನ್ನುವ ಶ್ರುತಿಗೆ ಅಪಾರ್ಥವನ್ನು ಹೇಳಲು ರಾಮಾನುಜರು ಅದಕ್ಕೆ ಸರಿಯಾದ ಅರ್ಥವನ್ನು ಸ್ಥಿರಪಡಿಸಿದರು. ಒಂದು ದಿವಸ ಅಭ್ಯಂಜನಕಾಲದಲ್ಲಿ—

"ತಸ್ಯಯಥಾ ಕಪ್ಯಾಸಂ ಪುಂಡರೀಕ ಮೇವಮಕ್ಷಿಣಿ" ಎಂಬುವ ಶ್ರುತಿ ವಚನಕ್ಕೆ ಅಪಾರ್ಥವನ್ನು ಹೇಳಲು ಎಣ್ಣೆಯನ್ನೊತ್ತುತಿದ್ದ ರಾಮಾನುಜರದನ್ನು ಕೇಳಿ ಕಣ್ಣಿನಲ್ಲಿ ನೀರುಬಿಡಲು ಅದು ಅವನ ಮೈಮೇಲೆ ಬಿದ್ದಿತು. ಯಾದವ ಪ್ರಕಾಶನು ತಲೆಯೆತ್ತಿನೋಡಿ ನಿಮ್ಮ ದುಃಖಕ್ಕೆ ಕಾರಣವೇನೆಂದು ಕೇಳಲು—'ನಿಮ್ಮ ಅಪಾರ್ಥವನ್ನು ಕೇಳಿ ದುಃಖವುಂಟಾಯಿತು.'—ಎಂದು ಸರಿಯಾದ ಅರ್ಥವನ್ನು ಹೇಳಿದರು. ಯತಿಗೆ ಕೋಪವುಂಟಾಗಿ ನಾನು ಹೇಳಿದಂತೆ ಓದಿದರೆ ಓದಿರಿ, ಇಲ್ಲವೆ—ಹೊರಟುಹೋಗಿರಿ-ಎಂದು ಗದರಿಸಲು ರಾಮಾನುಜರು ಕೋಪಗೊಂಡು ಎದುರಿಸಿ ನಿಂತರು. ಆಗ ಯಾದವ ಪ್ರಕಾಶನು ನಿಮ್ಮಿಂದ ಪ್ರಯೋಜನವಿಲ್ಲವೆಂದೂ, ಇವರಿಂದ ನಮ್ಮ ಮತವು ಕ್ಷೀಣವಾಗುತ್ತದೆಯಾದಕಾರಣ ಗಂಗಾಸ್ನಾನ ವ್ಯಾಜದಿಂದ ಕರೆದುಕೊಂಡು ಹೋಗಿ ಗಂಗೆಯಲ್ಲಿ ತಳ್ಳಿಬಿಡಬೇಕೆಂದು ಕೆಲವು ಜನ ಆಪ್ತರೊಂದಿಗೆ ಯೋಚಿಸಿ ರಾಮಾನುಜರನ್ನು ನೋಡಿ ನೀವು ಹೇಳಿದ ಅರ್ಥವು ಸಮೀಚೀನವಾಗಿದೆ ಎಂದು ಹೇಳಿ ಪುನಃ ಪಾಠವನ್ನು ಹೇಳತೊಡಗಿದನು. ಕೆಲವು ದಿವಸಗಳು ಕಳೆದ ತರುವಾಯ ಮಾಘಮಾಸದಲ್ಲಿ ಗಂಗಾಯಾತ್ರೆಗಾಗಿ ಹೊರಟನು. ಬಹು ದೂರ ಹೋದಮೇಲೆ, ಒಂದು ಮಹಾರಣ್ಯದಲ್ಲಿ ರಾಮಾನುಜರು ಬಹಿರ್ದೇಶಕ್ಕೆಂದು ಹಿಂದೆ ಉಳಿಯಲು, ಗೋವಿಂದ ಭಟ್ಟರು ಸನ್ಯಾಸಿಯ ದುರಾಲೋಚನೆಯನ್ನು ತಿಳುಹಿ ಹಿಂತಿರುಗಿ ಹೋಗುವಂತೆ ಹೇಳಿ ತಾವು ಗುಂಪಿಗೆ ಹೋಗಿ ಸೇರಿದರು. ರಾಮಾನುಜರು ಒಂಟಿಯಾಗಿ ಮಾರ್ಗವನ್ನು ಬಿಟ್ಟು ನಿಂತಿದ್ದರು. ಆಗ ವರದರಾಜಸ್ವಾಮಿಯೂ ಪೆರುಂದೇವಿಯುಮ್ಮನೂ—ಬೇಡ ಬೇಡಿತಿಯರ ವೇಷವನ್ನು ಧರಿಸಿ ಆ ಮಾರ್ಗವಾಗಿ ಬರುತ್ತಿರು

ವುದನ್ನು ಅವರು ಕಂಡು—ನೀವು ಎಲ್ಲಿಗೆ ಹೋಗುತ್ತಿರುವಿರಿ? ಎಂದು ಕೇಳಲು, ಅವರು ನಾವು ಕಂಚಿಗೆ ಹೋಗುವೆವೆಂದರು. ಅದಕ್ಕೆ ರಾಮಾನುಜರು-ನನ್ನನ್ನೂ ಜತೆಯಲ್ಲಿ ಕರೆದುಕೊಂಡು ಹೋಗಿ ಅಲ್ಲಿಗೆ ಸೇರಿಸುವಿರಾ' ಎಂದು ಕೇಳಲು ಅವರಿಬ್ಬರೂ ಒಪ್ಪಿ, ಮುಂದೆ ಮಾರ್ಗವನ್ನು ತೋರಿಸುತ್ತ ಹೊರಟರು. ರಾಮಾನುಜರು ಅವರನ್ನು ಹಿಂಬಾಲಿಸಿದರು. ಸ್ವಲ್ಪದೂರ ಹೋಗುವದರಲ್ಲಿಯೇ ಬೇಡಿತಿಯು ಬಾಯಾರಿಕೆಯಿಂದ ನೀರನ್ನು ಬೇಡಲು ಬೇಡರವನು ಇಲ್ಲಿಯೇ ಭಾವಿಯಿರುವುದು,ಎಂದನು. ರಾಮಾನುಜರು ಉಪಕಾರವನ್ನು ಮಾಡಿದ ಅವರಿಗೆ ಸ್ವಲ್ಪನೀರನ್ನಾದರೂ ತಂದುಕೊಡುವ, ಎಂದು, ಭಾವಿಯಲ್ಲಿ ಳಿದು, ನೀರನ್ನು ತುಂಬಿ ತಂದುಕೊಟ್ಟರು. ಅವರಿಬ್ಬರೂ ನೀರನ್ನು ಕುಡಿದು, ಪುಣ್ಯಕೋಟಿ ವಿಮಾನವು ಇಲ್ಲಿಯೇ ಇರುವುದು ನೋಡಿರೆಂದು ಹೇಳಿ, ಅಂತರ್ಧಾನವಾದರು. ರಾಮಾನುಜರು ಧಡಪೇರಿ ಬಂದು ಅರುಣೋದಯದಲ್ಲಿ ಪುಣ್ಯಕೋಟಿ ವಿಮಾನವನ್ನು ಸೇರಿ, ಆಶ್ಚರ್ಯದಿಂದ ತಟಾಕದಲ್ಲಿ ಮಿಂದು ಮಡಿಯುಟ್ಟು ವರದ ರಾಜನ ಸನ್ನಿಧಿಗೆ ಬಂದು ಸೇವಿಸಿ ಪ್ರತಿದಿನವೂ ಸ್ವಾಮಿಗೆ ತಿರುಮಂಜನ ಕೈಂಕರ್ಯವನ್ನು ಮಾಡುತಿದ್ದರು.

ಅಲ್ಲಿ ಯಾದವಪ್ರಕಾಶನು ರಾಮಾನುಜರನ್ನು ಹುಡುಕಿ ಕಾಣದೆ ಮಹಾಟವಿಯಲ್ಲಿ ಕ್ಷುದ್ರಮೃಗಗಳಿಂದ ನಾಶವಾಗಿರಬೇಕೆಂದು ಅಂತುಸಂತೋಷಪಟ್ಟು ಬಹಿರಂಗವಾಗಿ ವ್ಯಸನವನ್ನು ತೋರ್ಪಡಿಸುತ್ತ ಗಂಗಾತೀರವನ್ನು ಸೇರಿ ಮಾಘಸ್ನಾನವನ್ನು ಮಾಡುತ್ತಿದ್ದರು. ಒಂದುದಿನ ಗೋವಿಂದ ಭಟ್ಟರು ಗಂಗೆಯಲ್ಲಿ ಸ್ನಾನಮಾಡುತ್ತಿರಲು ಯಾದವಪ್ರಕಾಶನು ಒಂದು ಲಿಂಗವು ಅವರ ಕಯ್ಗೆಬಂದು ಸೇರುವಂತೆಮಾಡಿ ಅವರನ್ನು ನೋಡಿ ಇದೇನಾಶ್ಚರ್ಯವು! ನಿಮ್ಮಲ್ಲಿ ಶಿವಾನುಗ್ರಹವಿರುವದರಿಂದ ಇನ್ನುಮೇಲೆ ನಿಮಗೆ ಇದೇ ಆರಾಧ್ಯದೇವತೆಯೆಂದು ಹೇಳಿ ಕೆಲವು ವಿಷಯಗಳನ್ನು ಬೋಧಿಸಿ ಶಿವಭಕ್ತನನ್ನಾಗಿ ಮಾಡಿ ಉಳ್ಳಂಗೈಕೊಣಂದರ್ನೈನಾರೆಂದು ಹೆಸರಿಟ್ಟು ಕರೆದರು.

ಗೋವಿಂದಭಟ್ಟರು ಆ ಶಿವಲಿಂಗವನ್ನು ಮಧು ಮಂಗಲದಲ್ಲಿ ಪ್ರತಿಷ್ಠಿಸಿ, ಪೂಜಿಸುತ್ತಿದ್ದು ಕೆಲವು ಕಾಲದಮೇಲೆ ಕಾಳಹಸ್ತಿಗೆ ಹೋಗಿ ಅಲ್ಲಿ ಶಿವನನ್ನು ಪೂಜಿಸುತ್ತಿದ್ದನು.

ಯಾದವ ಪ್ರಕಾಶನು ಕಂಚಿಗೆ ಹಿಂತಿರುಗಿ ಬಂದು ವರದರಾಜನಿಗೆ ಸೇವೆಯನ್ನು ಮಾಡುತಲಿದ್ದ ರಾಮಾನುಜರನ್ನು ನೋಡಿ ಸಂತೋಷವನ್ನು ನಟಿಸುತ್ತ ನೀವು ಕಾಡಿನಲ್ಲಿ ಕ್ಷುದ್ರಮೃಗಗಳಿಗೆ ಬಲಿಯಾದಿರೆಂದು ವ್ಯಸನಪಡುತ್ತಿದ್ದೆವು. ಬದುಕಿಬಂದ ಬಗೆಹೇಗೆ?-ಎಂದು ಕೇಳಲು ರಾಮಾನುಜರು ಬೇಡರ ವೃತ್ತಾಂತವನ್ನು ಹೇಳಲು ಸನ್ಯಾಸಿಯು ಅವರ ಪ್ರಭಾವದಿಂದ ಆಶ್ಚರ್ಯಯುಕ್ತನಾಗಿ, ಅಸೂಯೆಯು ಇನ್ನೂ ಹೆಚ್ಚಾಗಲು ಬಹಿರಂಗದಲ್ಲಿ ಕೋಪವನ್ನು ತೋರಿಸದೆ ಪುನಃಶಾಸ್ತ್ರಾಭ್ಯಾಸವನ್ನು ಮಾಡಿಸುತ್ತಿದ್ದರು.

ಹೀಗಿರಲು, ಒಂದುದಿನ ಇಬ್ಬರು ಶ್ರೀವೈಷ್ಣವರು ಕಂಚಿಯಲ್ಲಿ ವರದರಾಜಸ್ವಾಮಿಯನ್ನು ಸೇವಿಸಿ, ಅಲ್ಲಿಂದ ಶ್ರೀರಂಗವನ್ನು ಸೇರಿ ಆಳವಂದಾರರನ್ನು ಸೇವಿಸಿ ನಿಂತಿರಲು ಅವರು ಕಂಚಿಯಲ್ಲಿ ವಿಶೇಷವೇನೆಂದು ಕೇಳಿದರು. ಶ್ರೀವೈಷ್ಣವರದಕ್ಕೆ ರಾಮಾನುಜರಿಗೆ ವರದರಾಜಸ್ವಾಮಿಯು ಬೇಡವೇಷದಿಂದ ಕಟಾಕ್ಷಿಸಿದುದನ್ನೂ ಯಾದವ ಪ್ರಕಾಶನ ವೃತ್ತಾಂತವನ್ನೂ ತಿಳುಹಿದರು. ಆಗ ಆಳವಂದಾರರು ಶ್ರೀರಂಗನಾಥನಲ್ಲಿ ತಾನು ಮಾಡಿದ ಪ್ರಪತ್ತಿಯು ಸಫಲವಾಯಿತೆಂದು ರಾಮಾನುಜರನ್ನು ನೋಡಲಿಚ್ಛೆಯುಳ್ಳವರಾಗಿ ಶಿಷ್ಯರಿಂದೊಡಗೂಡಿ ಬರುತಿರುವ ಸಮಾಚಾರವನ್ನು ತಿರುಕ್ಕಚ್ಚಿನಂಬಿಗಳು ಕೇಳಿ ಇದಿರ್ಗೊಂಡು ವರದ ರಾಜಸ್ವಾಮಿಯ ಸನ್ನಿಧಿಗೆ ಕರೆದೊಯ್ಯಲು ಅವರು ಪ್ರದಕ್ಷಿಣ ನಮಸ್ಕಾರಗಳನ್ನು ಮಾಡಿ, ತೀರ್ಥಪ್ರಸಾದ ಶ್ರೀಶಠಗೋಪಗಳನ್ನು ಶಿರಸಾ ವಹಿಸಿ ನಿಂತಿದ್ದರು. ಆಗ ಯಾದವ ಪ್ರಕಾಶನು ಶಿಷ್ಯರ ಸಹಿತ ಪ್ರದಕ್ಷಿಣವನ್ನು ಮಾಡುತ್ತಿರಲು ಆಳವಂದಾರರು ರಾಮಾನುಜರಾರೆಂದು ಕೇಳಿ ತಿಳಿದು ಅವರನ್ನು ತಮ್ಮ ದಯಾದೃಷ್ಟಿಯಿಂದ ನೋಡಿ ಮಾತನಾಡಿಸಿದರೆ ಶಾಸ್ತ್ರಾಭ್ಯಾಸಕ್ಕೇನಾದರೂ ಉಂಟಾದೀತೆಂದು

ಅಘಟಿತಘಟನ ಸಾಮರ್ಥ್ಯವುಳ್ಳ ಶ್ರೀವರದ ರಾಜಸ್ವಾಮಿಯು ಅವರಿಗೆ ಒಳ್ಳೆಯ ಮನಸ್ಸನ್ನು ದಯಪಾಲಿಸಿ ತಮ್ಮ ಸ್ಥಾನಕ್ಕೆ ನಿಲ್ಲುವಂತೆ ಮಾಡಬೇಕೆಂದು ಸ್ವಾಮಿಯನ್ನು ಪ್ರಾರ್ಥಿಸಿ, ಶ್ರೀರಂಗಕ್ಕೆ ತೆರಳಿದರು.

ಆಗ ಅಲ್ಲಿಯ ದೊರೆಯ ಮಗಳಿಗೆ ಬ್ರಹ್ಮರಕ್ಷಸ್ಸು ಹಿಡಿದು ಯಾವ ಮಂತ್ರಗಾರನಿಂದಲೂ ಬಿಡಿಸಲಸಾಧ್ಯನಾಗಿ ಯಾದಪ್ರಕಾಶನು ಮಂತ್ರತಂತ್ರಗಳಲ್ಲಿ ಬಹಳ ಸಮರ್ಥನೆಂದು ತಿಳಿದು ಅವನನ್ನು ಕರೆಯಕಳುಹಿದನು. ಯಾದವಪ್ರಕಾಶನು ಶಿಷ್ಯಸಮೇತ ಬಂದು ರಾಜಪುತ್ರಿಗೆ ಮಂತ್ರವನ್ನು ಹಾಕಿ ಬ್ರಹ್ಮರಕ್ಷಸ್ಸನ್ನು ಬೆದರಿಸಲು ಅದು ಅವನಿಗಿಂತಲೂ ಹೆಚ್ಚಾಗಿ ಕೂಗುತ್ತ ನಿನ್ನಿಂದೇನಾದೀತು? ನಿನ್ನ ಪೂರ್ವಜನ್ಮಸ್ಮರಣೆಯಿಲ್ಲದೆ ಹೀಗೆ ಮಾತನಾಡುತ್ತಿರುವೆ; ಮೊದಲು ನೀನು ಮಧುರಾಂತಕವೆಂಬ ಅಗ್ರಹಾರದ ಪಶ್ಚಿಮದಿಕ್ಕಿನ ಸರೋವರದ ಸಮೀಪದಲ್ಲಿದ್ದ ಒಂದು ಹುತ್ತದಲ್ಲಿ ಉಡವಾಗಿದ್ದಿ; ಅಲ್ಲಿಗೆ ಒಬ್ಬ ವೇದ ವೇದಾಂತ ಪಾರಂಗತನಾದ ಬ್ರಾಹ್ಮಣನು ಬಂದು ಸರಸ್ಸಿನಲ್ಲಿ ಸ್ನಾನವನ್ನು ಮಾಡಿ, ದೇವತಾಪೂಜೆಯನ್ನು ಮಾಡಿ ಭೋಜನಮಾಡಿ ಎಲೆಯನ್ನು ಹತ್ತಿರ ಹತ್ತಿರದಲ್ಲಿ ಬಿಸುಟನು. ನೀನು ಆ ಎಲೆಯಲ್ಲಿದ್ದ ಅಗುಳನ್ನು ತಿಂದುದರಿಂದ ಈ ಬ್ರಾಹ್ಮಣ ಜನ್ಮವು ನಿನಗೆ ಬಂದಿತು. ನಾನು ಯಾಗದಲ್ಲಿ ಮಂತ್ರಲೋಪಮಾಡಿದುದರಿಂದ ಈ ಬ್ರಹ್ಮರಕ್ಷಸ್ಸುಜನ್ಮವು ನನಗೆ ಬಂದಿತು. ನಿನ್ನಿಂದ ನನ್ನನ್ನೋಡಿಸಲಾದೀತೇ? ನಿನ್ನ ಶಿಷ್ಯಮಂಡಲಿಯಲ್ಲಿರುವ ರಾಮಾನುಜರು ನನ್ನ ಶಿರಸ್ಸಿನಮೇಲೆ ಪಾದವನ್ನಿರಿಸಿ, ಶ್ರೀಪಾದ ತೀರ್ಥವನ್ನು ದಯಪಾಲಿಸಿದರೆ ನಾನು ಹೋಗುವೆನೆಂದಿತು. ಆಗ ರಾಜನು ರಾಮಾನುಜರನ್ನು ಪ್ರಾರ್ಥಿಸಿ, ಅವರ ಶ್ರೀಪಾದತೀರ್ಥವನ್ನು ಕೊಡಿಸಿ, ತಿರುವಡಿಯನ್ನು ಸ್ಪರ್ಶಿಸುವಂತೆ ಮಾಡಲು, ಬ್ರಹ್ಮರಕ್ಷಸ್ಸು ಶಾಪದಿಂದ ಮುಕ್ತನಾಗಿ ಹೊರಟು ಹೋದನು. ರಾಕ್ಷಸನಿಂದ ಮುಕ್ತಳಾದ ತನ್ನ ಮಗಳಂನೋಡಿ, ಅರಸು, ಯಾದವಪ್ರಕಾಶನಿಗೂ, ರಾಮಾನುಜರಿಗೂ ಬಹುಮಾನ ಮಾಡಿದನು. ರಾಮಾನುಜರು ತಮಗೆ ಬಂದ ಬಹುಮಾನವನ್ನು ಸನ್ಯಾಸಿಗೆ ಕೊಟ್ಟ

ರು. ಆತನು ಅದನ್ನೆಲ್ಲವನ್ನೂ ತೆಗೆದುಕೊಂಡು ಶಿಷ್ಯರಿಂದ ತನಗಾದ ಪರಾಜಯವನ್ನು ನೆನೆದು ಅಸೂಯೆಪಡುತ್ತಿದ್ದನು.

ಮತ್ತೊಂದು ದಿನ ಯಾದವಪ್ರಕಾಶನು—

"ಸರ್ವಂಖಲ್ವಿದಂ ಬ್ರಹ್ಮ..................."

ಎಂಬ ಶ್ರುತಿವಚನಕ್ಕೆ ಅದ್ವೈತಪರವಾಗಿ ಅರ್ಥವನ್ನು ಹೇಳಲು ಲಕ್ಷ್ಮಣಾರ್ಯರದನ್ನು ನಿರಾಕರಿಸಿ, ವಿಶಿಷ್ಟಾದ್ವೈತ ಪರವಾಗಿ ಸರಿಯಾದ ಅರ್ಥವನ್ನು ಹೇಳಿದರು. ಅದಕ್ಕಾತನು ಕುಪಿತನಾಗಿ ಇಂದಿನಿಂದ ನಿಮಗೆ ಇಷ್ಟಬಂದಲ್ಲಿ ಓದಬಹುದೆನಲು ರಾಮಾನುಜರು ಆತನ ಸಮೀಪವನ್ನು ಬಿಟ್ಟು ವರದ ರಾಜಸ್ವಾಮಿಗೆ ತಿರುಮಂಜನ ಸೇವೆಯನ್ನು ಮಾಡುತ್ತಿದ್ದರು.

ಇತ್ತ ಶ್ರೀರಂಗದಲ್ಲಿ ಆಳವಂದಾರರಿಗೆ ದೇಹಾಯಾಸವುಂಟಾಗಲು ತಿರುವರಂಗ ಪೆರುಮಾಳರೆಯರೆ ಮುಂತಾದ ಶಿಷ್ಯರುಗಳು ಅವರ ಶ್ರೀಪಾದಗಳಿಗೆ ದಂಡವತ್ಪ್ರಣಾವನ್ನು ಮಾಡಿ, ದಾಸರಾದ ತಮಗೆ ಹಿತಕರವಾದ ಕೆಲವು ವಿಷಯಗಳನ್ನು ಹೇಳಬೇಕೆಂದು ಪ್ರಾರ್ಥಿಸಿದರು. ಆಗ ಆಳವಂದಾರರಿಗೆ ಅಂತರಂಗವು ಕರಗಿ-ಸದ್ಗುರುಕಟಾಕ್ಷದಿಂದ ಸ್ವಸ್ತಿಭರರಾದ ನೀವು ಗುರುಪರಂಪರೆಯಲ್ಲಿ ಕೃತಜ್ಞತಾ ಜ್ಞಾನವನ್ನುಳ್ಳವರಾಗಬೇಕು. ಆಜ್ಞಾನುಜ್ಞಾರೂಪವಾದ ಭಗವತ್ಕೈಂಕರ್ಯವನ್ನು ಮಾಡಬೇಕು. ಇವು ಭಾಗವತಾಚಾರ್ಯ ಪರ್ಯಂತವೂ ಇರುವವು. ಮತ್ತು ಪರಮ ಪುರುಷಾರ್ಥೋಪಾಯವಾದ ಪ್ರಪದನವನ್ನು ಅನುಷ್ಠಿಸಬೇಕು. ಹಿಂದೆ ಹೇಳಿದ ಕೃತಜ್ಞತೆಯೂ—ಕೈಂಕರ್ಯವೂ ದೇಹಾವಸಾನದವರೆಗೂ ಇರಬೇಕೆಂದು ತಿಳುಹಬೇಕು.—" ಇಷ್ಟು ಹೇಳಿದುದಲ್ಲದೆ ಇನ್ನೂ ಅನೇಕ ಅರ್ಥವಿಶೇಷಗಳನ್ನು ತಿಳುಹಿದರು. ಅನಂತರ ಕಾಂಚೀಪುರದ ಶ್ರೀವೈಷ್ಣವರಿಬ್ಬರು ಬಂದು ಯಾಮುನಾರ್ಯರನ್ನು ವಂದಿಸಲು ಅವರು, ಆ ಇಬ್ಬರನ್ನು ನೋಡಿ—ಇಳೆಯಾಳ್ವಾರರ ಯೋಗಕ್ಷೇಮವನ್ನು ವಿಚಾರಿಸಿದರು- ಬ್ರಾಹ್ಮಣರು ಯೋಗಕ್ಷೇಮವನ್ನು ತಿಳುಹಿ ರಾಮಾನುಜರು ಯಾದವಪ್ರಕಾಶನನ್ನು ಬಿಟ್ಟು

ಸ್ವಾಮಿಯನ್ನು ಸೇವಿಸುತ್ತಿರುವ ಸಂಗತಿಯನ್ನು ತಿಳಿಸಿದರು. ಆಳವಂದಾರರು ತಾವು ಭಗವಂತನಲ್ಲಿ ಮಾಡಿಕೊಂಡ ಪ್ರಪತ್ತಿಯು ಸಫಲವಾಯಿತೆಂದು ಸಂತಸಗೊಂಡು ರಾಮಾನುಜರನ್ನು ಕರೆತರುವಂತೆ ಪೆರಿಯನಂಬಿಗಳಿಗೆ ನಿಯಮಿಸಿದರು. ಅವರು ಆಚಾರ್ಯ ನಿಯಮನವನ್ನು ಶಿರಸಾವಹಿಸಿ, ಕಂಚಿಯನ್ನು ಸೇರಿ ವರದರಾಜಸ್ವಾಮಿಯನ್ನು ಸೇವಿಸಿ, ರಾಮಾನುಜರು ಸ್ವಾಮಿಗೆ ತಿರುಮಜ್ಜನ ತೀರ್ಥವನ್ನು ತರುವ ಶಾಲೆಕ್ಕಿಣರ್ ಎಂಬ ಭಾವಿಯ ಹತ್ತಿರದಲ್ಲಿ ನಿಂತು, ಆಳವಂದಾರರು ಮಾಡಿದ ಚತುಶ್ಶ್ಲೋಕಿಯನ್ನೂ ಸ್ತೋತ್ರರತ್ನವನ್ನೂ ಹೇಳುತ್ತಿರಲು ರಾಮಾನುಜರು ತೀರ್ಥವನ್ನು ತರುತ್ತ-"ಬ್ರಹ್ಮಾಶ್ಶಿವಶ್ಶತಮುಖ..." ಎಂಬ ಶ್ಲೋಕವನ್ನು ಕೇಳಿ ಈ ಸ್ತೋತ್ರವನ್ನು ಮಾಡಿದ ಮಹಾನುಭಾವರನ್ನು ಸೇವಿಸಬೇಕೆಂದು ನಂಬಿಗಳನ್ನು ಪ್ರಾರ್ಥಿಸಿದರು. ಅದಕ್ಕೆ ಅವರು ಇವು ಆಳವಂದಾರರು ಮಾಡಿದ ದಿವ್ಯಸೂಕ್ತಿಗಳು. ನನ್ನೊಡನೆ ಬಂದರೆ ಅವರನ್ನು ತೋರಿಸುವೆನೆನಲು, ರಾಮಾನುಜರು ಸ್ವಾಮಿಗೆ ತೀರ್ಥವನ್ನು ಸಮರ್ಪಿಸಿ ಅನುಜ್ಞೆಯನ್ನು ಪಡೆದು, ಪ್ರಯಾಣೋನ್ಮುಖರಾದರು.

ಅತ್ತ ಶ್ರೀರಂಗದಲ್ಲಿ ಆಳವಂದಾರರು ಶಿಷ್ಯಸಮೇತರಾಗಿ ಶ್ರೀರಂಗನಾಥನನ್ನು ಸೇವಿಸಿ, ತೀರ್ಥವನ್ನು ಸ್ವೀಕರಿಸಿ ನಿಂತಿರಲು, ಸ್ವಾಮಿಯು ಅರ್ಚಕ ಮುಖದಿಂದ ಅವರನ್ನು ಪರಮಪದವನ್ನೈದುವಂತೆ ಆಜ್ಞಾಪಿಸಿದನು. ಆ ನಂತರ ಯಾಮುನಾಚಾರ್ಯರು ಮಠಕ್ಕೆ ಬಂದು ದುಃಖಿತರಾಗಿರುವುದನ್ನು ಕಂಡು ಶಿಷ್ಯರು, ಭಯದಿಂದ-ಕೊರತೆಯೇನೆಂದು ಕೇಳಲು, ಅವರು ನನಗೇನೂ ಕೊರತೆಯಿಲ್ಲ; ಆದರೆ ಎಷ್ಟು ಪ್ರಯತ್ನಿಸಿದರೂ ಇಳೆಯಾಳ್ವಾರರನ್ನು ಕಾಣಲಾಗಲಿಲ್ಲ; ಮತ್ತು ವ್ಯಾಸಸೂತ್ರಕ್ಕೆ ಭಾಷ್ಯವನ್ನು ಮಾಡಿ, ಆ ಅರ್ಥಗಳಲ್ಲಿ ಸಂಶಯವು ತೀರುವಂತೆ ಈಶ್ವರೇಶ್ವರಿಯರಾದ ದಿವ್ಯದಂಪತಿಗಳ ಮಹಾತ್ಮೆಗಳನ್ನು ವಿಸ್ತರಿಸಿ ಹೇಳಿದ ವ್ಯಾಸಪರಾಶರರ ನಾಮಧೇಯವನ್ನೂ ವೇದಾಂತಸಾರವಾದ ತಿರುಮಂತ್ರದಲ್ಲಿ ಹೇಳುವ ಸ್ವರೂಪೋಪಾಯಗಳೆಂಬ ಪುರುಷಾರ್ಥಗಳನ್ನೂ ವಿಸ್ತಾರವಾಗಿ ತೋರಿಸುವ "ತಿರುವಾಯಿ

ಮೊಳಿ"ಯನ್ನು ಹೇಳಿದ ನಮ್ಮಾಳ್ವಾರರ ತಿರುನಾಮವನ್ನು ಹುಡುಗರಿಗೆ ಇರಿಸಿ, ಅವರಿಂದ ಕಾರ್ಯನಿರ್ವಾಹ ಮಾಡಿಸಲು ನನ್ನಿಂದಾಗದೆಯೇ ಹೋಯಿತೆಂಬುದೇ ಕೊರತೆ ಎಂದು ಮೂರಂಗುಲಿಗಳನ್ನು ಮಡಿಸಿದರು. ಶಿಷ್ಯರು ಇವೆಲ್ಲವೂ ಸ್ವಾಮಿಚಿತ್ತವು. ತಾವು ಇದಕ್ಕಾಗಿ ಕೊರತೆಪಟ್ಟುಕೊಳ್ಳಕೂಡದೆಂದು ಸಮಾಧಾನಪಡಿಸಿದರು. ಯಾಮುನಾಚಾರ್ಯರು ಸ್ವಾಚಾರ್ಯರಾದ ಮಣಕ್ಕಾಲ್ ನಂಬಿಗಳ ಪಾದುಕೆಗಳನ್ನು ಆರಾಧಿಸಿ, ತೀರ್ಥವನ್ನು ಸ್ವೀಕರಿಸಿ, ತಮ್ಮ ಶ್ರೀಪಾದ ತೀರ್ಥವನ್ನೂ ಪಾದುಕೆಯನ್ನೂ ಶಿಷ್ಯರಿಗೆ ಕೊಟ್ಟು, ಅವರೆಲ್ಲರೂ ಉಪನಿಷದನುಸಂಧಾನವನ್ನು ಮಾಡುತ್ತಿರಲು ತಾವು ಆಚಾರ್ಯರ ತಿರುವಡಿಗಳನ್ನು ಧ್ಯಾನಿಸುತ್ತ ಬ್ರಹ್ಮರಂಧ್ರಮುಖೇನ ಪರಮಪದವನ್ನೈದಿದರು. ಆಗ ತಿರುವರಂಗಪ್ಪೆರುಮಾಳರೆಯರೇ ಮೊದಲಾದ ಶಿಷ್ಯರು ಯತಿಸಂಸ್ಕಾರ ವಿಧ್ಯುಕ್ತಪ್ರಕಾರವಾಗಿ ಕರ್ಮಗಳೆಲ್ಲವನ್ನೂ ನೆರವೇರಿಸಿ, ತಿರುಕ್ಕರುಂಬುಕೂರೆಯಲ್ಲಿ ಮಲಗಿಸಿಕೊಂಡಿರಲು ಕಂಚಿಯಿಂದ ರಾಮಾನುಜರನ್ನೊಡಗೊಂಡು ಆ ಮಾರ್ಗವಾಗಿ ಬರುತ್ತಿದ್ದ ಪೆರಿಯನಂಬಿಗಳು ಇಲ್ಲಿ ವೈಷ್ಣವ ಗೋಷ್ಠಿಗೆ ಕಾರಣವೇನೆಂದು ಕೇಳಿ, ಸಂಗತಿಯನ್ನರಿತು, ವ್ಯಸನದಿಂದ ಪರವಶರಾದರು. ಆಗ ಅಲ್ಲಿದ್ದ ಶ್ರೀವೈಷ್ಣವರು ಅವರಿಬ್ಬರನ್ನೂ ಸಮಾಧಾನಪಡಿಸಿ, ಆಳವಂದಾರರ ಚರಮವಿಗ್ರಹದ ಮುಂದೆ ಕರೆದು ಹೋಗಿಬಿಟ್ಟರು. ರಾಮಾನುಜರು ಆಳವಂದಾರರ ಚರಮವಿಗ್ರಹವನ್ನು ಆಪಾದ ಮಸ್ತಕ ಪರ್ಯಂತ ಸೇವಿಸುತ್ತಿರುವಾಗ ಮೂರು ಬೆರಳುಗಳು ಕೊಂಕಾಗಿರುವುದನ್ನು ನೋಡಿ, ಯಾವಾಗಲೂ ಹೀಗೆಯೇ—ಎಂದು ಕೇಳಲು, ಅಲ್ಲಿದ್ದವರು ಮೂರು ಬೆರಳುಗಳು ಡೊಂಕಾಗಿರುವುದಕ್ಕೆ ಆಳವಂದಾರರ ಅಭಿಪ್ರಾಯಗಳನ್ನು ವಿಸ್ತಾರವಾಗಿ ಹೇಳಿದರು. ರಾಮಾನುಜರು ಆಳವಂದಾರರ ಕಟಾಕ್ಷಕ್ಕೆ ಪಾತ್ರನಾದ ನನ್ನ ಮುಖಾಂತರ ಭಗವಂತನು ಈ ಕೆಲಸಗಳನ್ನು ನೆರವೇರಿಸುವನೆಂದು ಹೇಳಿದಾಕ್ಷಣವೇ ಡೊಂಕಾಗಿದ್ದ ಬೆರಳುಗಳು ನೆಟ್ಟಗಾದವು. ಅವರ ಮುಖವು ಪ್ರಸನ್ನವಾಯಿತು. ಇದನ್ನು ನೋಡಿದ ತಿರು

ವರಂಗ ಪೆರುಮಾಳರೆಂಬುರೇ ಮುಂತಾದವರು ವಿಸ್ಮಿತರಾಗಿ, ಮುಂದೆ ಇವರು ಆಚಾರ್ಯಸ್ಥಾನ ನಿರ್ವಾಹಕರಾಗುವರೆಂದು ಮನಸ್ಸಿನಲ್ಲಿ ಸಂತೋಷಪಟ್ಟು, ಆಳವಂದಾರರನ್ನು ದಹನ ಮಾಡಿದರು. ಅನಂತರ ರಾಮಾನುಜರು ಸ್ನಾನಮಾಡಿ, ಪೆರಿಯ ನಂಬಿಗಳ ಅಪ್ಪಣೆಯನ್ನು ಪಡೆದು ಶ್ರೀರಂಗನಾಥನನ್ನು ಸೇವಿಸದೆಯೇ ಹೊರಟು ಕಾಂಚೀಪುರವನ್ನು ಸೇರಿದರು.

ಹೀಗಿರಲು ಒಂದುದಿನ ತಿರುಕ್ಕಚ್ಚಿನಂಬಿಗಳು ವರದರಾಜನಿಗೆ ಕೈಂಕರ್ಯವನ್ನು ಮಾಡುತ್ತಿರುವಾಗ ಸ್ವಾಮಿಯು ಹಸನ್ಮುಖನಾಗಿರುವುದನ್ನು ನೋಡಿ, ಸ್ವಾಮಿಗೆ ಅವರು ಅಂತರಂಗ ಭಕ್ತರೆಂದು ತಿಳಿದು, ಪರಮಭಕ್ತರಿಗೆ ಶಾಸ್ತ್ರವೂ ಕಟ್ಟಳೆಯೂ ಇಲ್ಲವೆಂಬುವ ವಚನವನ್ನು ಸ್ಮರಿಸಿ, ಅವರನ್ನು ತಮ್ಮ ಗೃಹಕ್ಕೆ ಕರೆದುಕೊಂಡು ಹೋಗಿ ಆಸನವನ್ನು ಕೊಟ್ಟು ಸಾಷ್ಟಾಂಗ ಪ್ರಣಾಮವನ್ನು ಮಾಡಿ ಭೋಜನಕ್ಕೆ ದಯಮಾಡಿಸಬೇಕೆನಲು ನಂಬಿಯು ಅವರ ಮನೋಭಿಪ್ರಾಯವನ್ನು ತಿಳಿದು ಮನಸ್ಸಿನಲ್ಲಿ ಅವರ ಮಾತಿನಂತೆ ನಡೆಯದಿದ್ದರೆ ವ್ಯಾಕುಲಗೊಳ್ಳುವರು; ನಡೆದರು ಬ್ರಾಹ್ಮಣಶ್ರೇಷ್ಠರು, ಮಹಾ ಜ್ಞಾನಿಗಳು. ಹೇಗಾದರೂ ಆಗಲಿ, ಅವರಿಗೆ ಹಿತವಾಗುವಂತೆ ಮಾಡುವೆನೆಂದು ಯೋಚಿಸಿ, ಹಾಗೆಯೇ ಆಗಲೆಂದು ಒಪ್ಪಿ ತಮ್ಮ ಗೃಹಕ್ಕೆ ಹೊರಟುಹೋದರು. ರಾಮಾನುಜರು ತಮ್ಮ ಪತ್ನಿಯಿಂದ ಷಡ್ರಸೋಪೇತವಾದ ಅಡಿಗೆಯನ್ನು ಮಾಡಿಸಿ, ದೇವತಾರಾಧನಂಗೈದು ನಂಬಿಗಳಿಗಾಗಿ ಬಹು ಹೊತ್ತಿನವರೆಗೂ ನಿರೀಕ್ಷಿಸಿ, ಅವರು ಬಾರದಿರಲು ತಾನೇಹೋಗಿ ಕರೆತರುವೆನೆಂದು ಪತ್ನಿಗೆ ಹೇಳಿ ಹೊರಟು ಹೋದರು. ತಿರುಕ್ಕಚ್ಚಿ ನಂಬಿಯು ರಾಮಾನುಜರು ಹೊರಟುಹೋದ ಸಮಯವನ್ನು ನೋಡಿ ಅವರ ಮನೆಗೆ ಬಂದು "ಬಹು ಹಸಿದಿರುವೆನು-ನಿಮ್ಮ ಪತಿಯು ಬರುವವರೆಗೂ ಕಾಯಲಾಗುವುದಿಲ್ಲ; ಸ್ವಾಮಿಗೆ ಸೇವೆಗೆ ಹೋಗಬೇಕೆಂದು ರಾಮಾನುಜರ ಪತ್ನಿಯೊಡನೆ ಹೇಳಲು ಪತಿಯ ಮನೋಭಿಪ್ರಾಯವನ್ನರಿಯದ ಆಕೆ, ನಂಬಿಗೆ ಭೋಜನಕ್ಕಿಟ್ಟಳು. ಅವರು ಊಟವನ್ನು

ಮಾಡಿ ಉಚ್ಛಿಷ್ಟ ಪಾತ್ರೆಯನ್ನು ಬಿಸುಟು ಹೊರಟುಹೋದರು. ಅನಂತರ ರಾಮಾನುಜರ ಪತ್ನಿಯಾದ ತಂಜಮಾಂಬೆಯು ಮಿಕ್ಕ ಅನ್ನವನ್ನು ದ್ವಾರಪಾಲಕರಿಗೆ ಕೊಟ್ಟು, ಪಾತ್ರೆಗಳನ್ನು ತೊಳೆದು ಸ್ನಾನಮಾಡಿ ಪುನಃ ಅಡಿಗೆಯನ್ನು ಮಾಡುತಿದ್ದಳು. ರಾಮಾನುಜರು ತಮ್ಮ ಮನೆಗೆ ಕಾಂಚೀಪೂರ್ಣರು ಬಂದಿರುವುದನ್ನು ತಿಳಿದು ತ್ವರಿತದಿಂದ ಬಂದು, ಪುನಃ ಸ್ನಾತೆಯಾಗಿ ಅಡಿಗೆಯನ್ನು ಮಾಡುತ್ತಿದ್ದ ತಮ್ಮ ಪತ್ನಿಯನ್ನು ವಿಸ್ಮಿತರಾಗಿ ಕಾರಣವನ್ನು ಕೇಳಲು, ಆಕೆ,- ಸ್ವಾಮಿ! ತಾವು ನಂಬಿಗಳನ್ನು ಕರೆತರುವುದಕ್ಕೆಂದು ಹೋದ ಸ್ವಲ್ಪಹೊತ್ತಿನೊಳಗಾಗಿ ಅವರು ಬಂದು ಬಹಳ ಹಸಿದಿರುವೆನು, ದೇವರಾಜನ ಸನ್ನಿಧಿಗೆ ಹೋಗಬೇಕೆಂದುದರಿಂದ ನಾನು ಅವರಿಗೆ ಬಡಿಸಿ, ಶೂದ್ರೋಚ್ಛಿಷ್ಟವು ತಮಗೆ ಯೋಗ್ಯವಲ್ಲವೆಂದು ಪುನಃ ಸ್ನಾತೆಯಾಗಿ ಅಡಿಗೆ ಮಾಡುತ್ತಿರುವೆನು.- ಎಂದಳು. ರಾಮಾನುಜರು ಆ ವಾಕ್ಯವನ್ನು ಕೇಳಿ ಉಚಿತ ಕೈಂಕರ್ಯವನ್ನು ಮಾಡಲರಿತಿರುವ ಸತ್ಪಾತ್ರವನ್ನು ತಾನು ಪಡೆಯಲಿಲ್ಲವೆಂದು ನೊಂದು ಕ್ಷಮಾಪ್ರಾರ್ಥನೆಯನ್ನು ಮಾಡಿ ದೇವತಾರಾಧನಾನಂತರ ಭುಂಜಿಸಿ, ತಿರುಕ್ಕಚ್ಚಿನಂಬಿಯ ಸಮೀಪಕ್ಕೆ ಹೋಗಿ, ಕೈಮುಗಿದು ತನ್ನನ್ನು ಹೀಗೆ ಉಪೇಕ್ಷೆಮಾಡಬಹುದೇ-ಎನಲು ಅವರು, ನೀವು ಹೇಳಿದ ಮಾತು ಲೋಕವಿರುದ್ಧವಾದು ವರ್ಣಸಂಕರ ಹೇತುವಾದ ಈ ಕಾರ್ಯವನ್ನು ಹೇಗೆ ಮಾಡಬೇಕೆಂದರು. ರಾಮಾನುಜರು ಅದಕ್ಕೆ ಒಪ್ಪಿ ಸ್ವಾಮೀ! ನನ್ನ ಮನಸ್ಸಿನಲ್ಲಿ ಕೆಲವು ವಿಷಯಗಳನ್ನು ಯೋಚಿಸಿಕೊಂಡಿರುವೆನು. ಅವುಗಳನ್ನು ವರದರಾಜನಿಗೆ ಬಿನ್ನವಿಸಿ, ಆ ಸ್ವಾಮಿಯಿಂದ ನಿಯಮಿತವಾದ ವಚನವನ್ನು ತಿಳಿಯಿಸಬೇಕೆಂದು ಪ್ರಾರ್ಥಿಸಿದರು. ಕಾಂಚೀಪೂರ್ಣರು (ತಿರುಕ್ಕಚ್ಚಿನಂಬಿ) ಹಾಗೆಯೇ ಆಗಲೆಂದು, ಏಕಾಂತವಾಗಿ ವರದ ರಾಜಸ್ವಾಮಿಗೆ ರಾಮಾನುಜರ ಅಭಿಪ್ರಾಯವನ್ನು ಬಿನ್ನವಿಸಲು ಸ್ವಾಮಿಯು ಹಸನ್ಮುಖನಾಗಿ 'ತಾನೇ ಪರಬ್ರಹ್ಮ-ಜಗತ್ಕಾರಣಂ. ಜೀವಾತ್ಮ ಪರಮಾತ್ಮರುಗಳಿಗೆ ಬೇಧವುಂಟು. ಮುಮುಕ್ಷುಗಳಿಗೆ ಪ್ರಪತ್ತಿಯೇ ಉಪಾಯವು. ಮದ್ಭಕ್ತರಿಗೆ

ದೇಹಾವಸಾನದಲ್ಲಿ ಮೋಕ್ಷವು. ಭಕ್ತರಲ್ಲಿ ನೀಚಸ್ಮೃತಿಯನ್ನು ಮಾಡಕೂಡದು. ಪೆರಿಯನಂಬಿಗಳನ್ನು ಆಶ್ರಯಿಸು.' ಎಂದು ಆಜ್ಞಾಪಿಸಿದ ಪ್ರತ್ಯುತ್ತರವನ್ನು ರಾಮಾನುಜರಿಗೆ ತಿಳಿಯಿಸಿದರು. ತಾನು ಚಿಂತಿಸಿದ ಅರ್ಥವು ಇದೇ ಅಹುದೆಂದು ಸಂತೋಷದಿಂದ ಅವರ ಅಪ್ಪಣೆಯನ್ನು ಪಡೆದು ಪೆರಿಯನಂಬಿಗಳ ಸೇವಾರ್ಥವಾಗಿ ಹೊರಟರು.

ಶ್ರೀರಂಗದಲ್ಲಿ ಆಳವಂದಾರರಶಿಷ್ಯರು ತಮ್ಮ ಆಚಾರ್ಯರ ಕೃಪಾಕಟಾಕ್ಷಕ್ಕೆ ಪಾತ್ರರಾದ ಇಳೆಯಾಳ್ವಾರರು ಅವರ ಸ್ಥಾನಕ್ಕೆ ಅರ್ಹರೆಂದು ಭಾವಿಸಿ, ಅವರನ್ನು ಕರೆದುಕೊಂಡು ಬರುವಂತೆ ಪೆರಿಯನಂಬಿಗಳಿಗೆ ವಿಜ್ಞಾಪಿಸಿಕೊಳ್ಳಲಾಗಿ ಅವರು ಹಾಗೆಯೇ ಆಗಲೆಂದೊಪ್ಪಿ ಶ್ರೀರಂಗ ಕ್ಷೇತ್ರದಿಂದ ಹೊರಟು ನಡುವೆ, ಮಧುರಾಂತಕನೆಂಬ ಗ್ರಾಮದಲ್ಲಿಳಿದುಕೊಂಡರು. ವರದರಾಜನ ಅಪ್ಪಣೆಯಂತೆ ನಂಬಿಗಳನ್ನು ಕಾಣಲಿಚ್ಛೆಯಿಂದ ರಾಮಾನುಜರು ಅದೇ ಮಾರ್ಗವಾಗಿ ಬರುತ್ತ ನಂಬಿಗಳು ಅಲ್ಲಿರುವ ಸಂಗತಿಯನ್ನರಿತು, ಹುಡುಕಿಕೊಂಡುಹೋದ ಪದಾರ್ಥವು ಕಯ್ಗೆ ಸಿಕ್ಕಿದಂತಾಯ್ತೆಂದು ಸಂತೋಷದಿಂದ ಅವರ ಸಮೀಪವನ್ನು ಸೇರಿ ದೇವರಾಜಸ್ವಾಮಿಯ ನಿಯಮನ್ನು ಹೇಳಿ ತನ್ನನ್ನು ಶಿಷ್ಯನನ್ನಾಗಿ ಮಾಡಿಕೊಳ್ಳಬೇಕೆಂದು ದಂಡವತ್ಪ್ರಣಾಮವನ್ನು ಮಾಡಿ ಪ್ರಾರ್ಥಿಸಿದರು. ಪೆರಿಯನಂಬಿಯು ಕಂಚಿಯಲ್ಲಿ ವರದರಾಜನ ಸನ್ನಿಧಿಯಲ್ಲಿ ಮಾಡುವೆನೆನಲು ರಾಮಾನುಜರು ಅವರನ್ನು ನೋಡಿ ಆಳವಂದಾರರ ವಿಷಯದಲ್ಲಿ ನಡೆದ ಸಂಗತಿಯನ್ನು ಮರೆಯಕೂಡದು; ಕಾಲಸನ್ನು ಮೀರಲಾಗದು; ಆದುದರಿಂದ ಈಗಲೇ ತನ್ನನ್ನು ಪಂಚಸಂಸ್ಕೃತನನ್ನಾಗಿ ಮಾಡಬೇಕೆಂದು ಪ್ರಾರ್ಥಿಸಿದರು. ಅನಂತರ ಪೆರಿಯನಂಬಿಯು ಹಾಗಾಗಲೆಂದೊಪ್ಪಿ, ಕೋದಂಡ ರಾಮಸ್ವಾಮಿಯ ಸನ್ನಿಧಿಯಲ್ಲಿ ರಾಮಾನುಜರಿಗೆ ಪಂಚಸಂಸ್ಕಾರವನ್ನೂ ಸರ್ವಮಂತ್ರೋಪದೇಶವನ್ನೂ ಉಪದೇಶಿಸಿದರು. ರಾಮಾನುಜರು ಕೋದಂಡಪಾಣಿಗೆ ನಮಸ್ಕರಿಸಿ ಆಚಾರ್ಯರನ್ನು ಮುಂದಿಟ್ಟುಕೊಂಡು ಕಂಚಿಗೆ ಬಂದು ತಮ್ಮ ಮನೆಯ ಅರ್ಧಭಾಗವನ್ನು ಅವರಿಗೆ ವಾಸಯೋಗ್ಯ

ನಾಗಿ ಮಾಡಿ ಬೇಕಾದವುಗಳನ್ನು ಒದಗಿಸಿಕೊಟ್ಟರು. ನಂಬಿಯು ಅಲ್ಲಿಯೇ ವಾಸಮಾಡುತ ರಾಮಾನುಜರಿಗೆ ವ್ಯಾಸಸೂತ್ರಾರ್ಥಗಳನ್ನೂ ತಿರುವಾಯ್ಮೊಳಿಯೇ ಮೊದಲಾದ ಮೂರುಸಾವಿರ ತಿರುವಾಯಿಮೊಳಿಯನ್ನೂ ಉಪದೇಶಿಸಿದನು.

ಒಂದು ದಿನ ರಾಮಾನುಜರು ಅಭ್ಯಂಜನ ಮಾಡುತಿರುವಾಗ ತಮಗೆ ಎಣ್ಣೆಯೊತ್ತುತ್ತಿದ್ದ ಶ್ರೀ ವೈಷ್ಣವ ಬ್ರಾಹ್ಮಣನು ಹಸಿದಿರುವುದನ್ನು ನೋಡಿ ದಯಾರ್ದ್ರಹೃದಯರಾಗಿ ಮನೆಯಲ್ಲಿ ಭಕ್ಷ್ಯಗಳೇನಾದರೂ ಇದ್ದಲ್ಲಿ ಕೊಡುವಂತೆ ಪತ್ನಿಗೆ ಆಜ್ಞಾಪಿಸಲು ಆಕೆ, ಇಲ್ಲವೆಂದು ಹೇಳಿದಳು. ರಾಮಾನುಜರು ಪತ್ನಿಯ ಲುಬ್ಧಸ್ವಭಾವವನ್ನು ಅರಿತವರಾದುದರಿಂದ ಕಾರ್ಯಾಂತರದಿಂದ ಆಕೆಯನ್ನು ಕಳುಹಿಸಿ, ತಾನೇ ಒಳಹೊಕ್ಕು ಮುಚ್ಚಿರಿಸಿದ್ದ ಪದಾರ್ಥವನ್ನು ಬ್ರಾಹ್ಮಣನಿಗೆ ಕೊಟ್ಟು ಭಾರ್ಯೆಯನ್ನು ಕೋಪಿಸಿಕೊಂಡರು. ಮತ್ತೊಂದುದಿನ ರಾಮಾನುಜರು ಕಾರ್ಯಾಂತರದಿಂದ ಪೆರಂಬುದೂರಿಗೆ ಹೋಗಿರಲು, ಅವರ ಪತ್ನಿಯು, ಪೆರಿಯನಂಬಿಯ ಪತ್ನಿಯೊಡನೆ ಭಾವಿಯ ಬಳಿಯಲ್ಲಿ ಜಗಳವಾಡಿದಳು. ಈ ಸಂಗತಿಯನ್ನು ಪೆರಿಯ ನಂಬಿಯು ಕೇಳಿ ಭಾಗವತಾಪಚಾರವಾಯ್ತೆಂದು ತಮ್ಮ ಭಾರ್ಯೆಯನ್ನು ಕರೆದುಕೊಂಡು ಶ್ರೀರಂಗಕ್ಕೆ ಹೊರಟುಹೋದರು. ರಾಮಾನುಜರಿಗೆ ಈ ಸಂಗತಿಯು ತಿಳಿಯಲು ಕುಪಿತರಾಗಿ ತಮ್ಮ ಪತ್ನಿಯನ್ನು ತವರ್ಮನೆಗೆ ಕಳುಹಿ, ಭಾಗವತಾಪಚಾರರೂಪವಾದ ಮೂರು ತಪ್ಪುಗಳಿಂದ ಆಕೆಯನ್ನು ತ್ಯಜಿಸಿ, ವರದರಾಜನ ಅಪ್ಪಣೆಯಂತೆ ತುರ್ಯಾಶ್ರಮವನ್ನು ಸ್ವೀಕರಿಸಿ, ಯತಿರಾಜರೆಂಬ ನಾಮಧೇಯವನ್ನು ಪಡೆದರು.

ಅನಂತರ ಗೋವಿಂದ ಭಟ್ಟರನ್ನು ಕಾಳಹಸ್ತಿಯಿಂದ ಕರೆಯಿಸಿ, ತಮ್ಮ ಶಿಷ್ಯರನ್ನಾಗಿ ಮಾಡಿಕೊಳ್ಳುವಂತೆ ಪೆರಿಯ ತಿರುಮಲೆನಂಬಿಗಳಿಗೆ ಹೇಳಿಕಳುಹಿದರು. ಶ್ರೀವತ್ಸಚಿಹ್ನಮಿಶ್ರರೆಂಬ ಕೂರತ್ತಾಳ್ವಾರರು, ನಡದೂರಾಳ್ವಾನನು, ಮೊದಲಿಯಾಂಡಾನನು, ಎಂಬ ಮೂವರು ಯತಿರಾಜರ ಪಾದಗಳನ್ನು ಆಶ್ರಯಿಸಿದರು. ಮತ್ತು ಯಾದವಪ್ರಕಾ

ಶನ ತಾಯಿಯು ರಾಮಾನುಜರ ಸಂಭ್ರಮವನ್ನು ನೋಡಿ, ಯಾದವ ಪ್ರಕಾಶನೂ ಇವರ ಪಾದವನ್ನು ಆಶ್ರಯಿಸಿದರೆ ಉತ್ತಮವೆಂದು ಯೋಚಿಸುತ್ತಿರಲು, ದೈವಯೋಗದಿಂದ ಅವಳ ಉದ್ದೇಶಕ್ಕೆ ಅನುಕೂಲವಾಗಿ, ಅದೇಬಳ್ಳಿಯೆಂದೆಂಬ ಉಪಶ್ರುತಿಯುಂಟಾದುದನ್ನು ಕೇಳಿ ಆಶ್ಚರ್ಯದಿಂದ ತನ್ನ ಪುತ್ರನಿಗೆ ತಿಳಿಸಿದಳು. ಯಾದವ ಪ್ರಕಾಶನು ತಾನು ಶಿಖಾಯಜ್ಞೋಪವೀತಗಳ ತ್ಯಾಗಕ್ಕೆ ಪ್ರಾಯಶ್ಚಿತ್ತವಾಗಿ ಭೂಪ್ರದಕ್ಷಿಣವನ್ನು ಮಾಡಬೇಕಾದುದು ವಿಹಿತವು; ಆದರೆ ಅದನ್ನು ಮಾಡಲು ಜರೆಯಿಂದ ಅಶಕ್ತನಾಗಿರುವೆನೆಂದು ಯೋಚಿಸುತ್ತಿರಲು, "ಯತಿರಾಜನಿಗೆ ಪ್ರದಕ್ಷಿಣ ನಮಸ್ಕಾರಗಳನ್ನು ಮಾಡಿದರೆ ಭೂಪ್ರದಕ್ಷಿಣೆಯನ್ನು ಮಾಡಿದಂತಾಗುವುದೆಂದು ದೇವರಾಜನು ಯತಿಯ ಸ್ವಪ್ನದಲ್ಲಿ ಆಜ್ಞಾಪಿಸಿದನು. ಸನ್ಯಾಸಿಯು ಪುನಃ ಚಪಲಚಿತ್ತನಾಗಿ ತನ್ನ ಮನದ ಯೋಚನೆಗಳನ್ನು ತಿರುಕ್ಕಚ್ಚಿನಂಬಿಗಳಿಂದ ಸ್ವಾಮಿಗೆ ತಿಳುಹಲು, ಮೊದಲಿನಂತೆಯೇ ಪ್ರತ್ಯುತ್ತರವು ಬಂದಿತು. ಆದರಿಂದ ಮನಸ್ಸಿಳಿದು ರಾಮಾನುಜರಿಗೆ ಪ್ರದಕ್ಷಿಣ ನಮಸ್ಕಾರಗಳನ್ನು ಮಾಡಿ ನಡೆದ ಸಂಗತಿಗಳೆಲ್ಲವನ್ನೂ ತಿಳುಹಿ ತಮಗೆ ತ್ರಿದಂಡ ಧಾರಣವನ್ನು ಮಾಡಿಸಿ, ಕೃಪೆಗೈಯಬೇಕೆಂದು ಪ್ರಾರ್ಥಿಸಿದನು. ರಾಮಾನುಜರು ವಿಸ್ಮಿತರಾಗಿ ದಯೆಯಿಂದ ಯತಿಗೆ ಪ್ರಾಯಶ್ಚಿತ್ತ ಪೂರ್ವಕವಾಗಿ ತ್ರಿದಂಡ ಧಾರಣವನ್ನು ಮಾಡಿಸಿ, ಗೋವಿಂದ ಜೀಯರೆಂದು ಹೆಸರಿಟ್ಟು ಯತಿಧರ್ಮಸಮುಚ್ಚಯವೆಂಬ ಗ್ರಂಥವನ್ನು ಮಾಡಬೇಕೆಂದು ಆಜ್ಞಾಪಿಸಲು, ಅವರು ಅದೇಪ್ರಕಾರವಾಗಿ ಮಾಡಿ, ರಾಮಾನುಜರಲ್ಲಿ ಭಕ್ತಿಯುತರಾಗಿದ್ದು ಮೋಕ್ಷವನ್ನು ಪಡೆದರು.

ಈ ಸಂಗತಿಗಳೆಲ್ಲವನ್ನೂ ಶ್ರೀರಂಗದಲ್ಲಿದ್ದ ಆಳವಂದಾರರ ಶಿಷ್ಯರು ಕೇಳಿ ಆಶ್ಚರ್ಯದಿಂದ ಯತಿರಾಜರನ್ನು ಅಲ್ಲಿಗೆ ಕರೆದುಕೊಂಡು ಬರಬೇಕೆಂದು ತಿರುವರಂಗಪ್ಪೆರುಮಾಳರೈಯರನ್ನು ಪ್ರಾರ್ಥಿಸಲು ಅವರು ಆ ಪ್ರಕಾರವೇ ಕಂಚಿಯನ್ನು ಸೇರಿ ವರದರಾಜಸ್ವಾಮಿಯನ್ನು ತಮ್ಮ ಗಾನದಿಂದ ಪ್ರಸನ್ನನಾಗಿ ಮಾಡಿಕೊಂಡರು. ಸ್ವಾಮಿಯು

ಗಾನಕ್ಕೆ ಮೆಚ್ಚಿ, ಅವರು ಬೇಡಿದ ರಾಮಾನುಜರನ್ನು ಬಹುಮಾನವಾಗಿ ಕೊಟ್ಟರು. ರಾಮಾನುಜರು ಸ್ವಾಮಿಯ ಅಪ್ಪಣೆಯನ್ನು ಪಡೆದು ಕೂರೇಶರೇ ಮೊದಲಾದ ಶಿಷ್ಯರಿಗೆ ತಮ್ಮ ಅರ್ಚಾವಿಗ್ರಹವಾದ ವರದರಾಜಸ್ವಾಮಿಯನ್ನು ಬಿಜಯಮಾಡಿಸಿಕೊಂಡು ಬರುವಂತೆ ಹೇಳಿ, ತಿರುಕ್ಕಚ್ಚಿನಂಬಿ-ಮೊದಲಾದವರು ದಾರಿಯನ್ನು ಬಿಡುವುದಕ್ಕೆ ಬರಲು ತವರ್ಮನೆಯಿಂದ ಅತ್ತೆಯಮನೆಗೆ ಹೋಗುವ ಹೆಣ್ಣುಮಗಳಂತೆ ತಾವು ವರದರಾಜಸ್ವಾಮಿಯನ್ನು ಅಗಲಲಾರದೆ ಚಿಂತಾಕುಲಿತ ಹೃದಯರಾಗಿ ಶ್ರೀರಂಗಕ್ಕೆ ಪ್ರಯಾಣಮಾಡಿದರು.

ರಾಮಾನುಜರ ಆಗಮನವನ್ನರಿತು ಶ್ರೀರಂಗದಲ್ಲಿರುವ ಮುಖಂಡರು ಶ್ರೀವೈಷ್ಣವರೊಡನೆ ತಿರುಮಾಲೆ ಪರಿವಟ್ಟವೇ ಮೊದಲಾದ ಮರ್ಯಾದೆಗಳೊಡನೆ ಬಂದು ಕಾವೇರೀತೀರದಲ್ಲಿದ್ದವರನ್ನು ಇದಿರ್ಗೊಂಡು ಭಗವತ್ಪ್ರಸಾದಗಳನ್ನು ಕೊಟ್ಟರು. ರಾಮಾನುಜರು ದಂಡವತ್ಪ್ರಣಾಮವನ್ನು ಮಾಡಿ, ರಂಗೇಶನ ತಿರುಮಾಲೆ ಮುಂತಾದವುಗಳನ್ನು ಶಿರಸಾವಹಿಸಿ, ತಿರುವೀಧಿ ಪ್ರದಕ್ಷಿಣವಾಗಿ ಬಂದು ಕ್ರಮವಾಗಿ ಶ್ರೀರಂಗನಾಯಕಿಯನ್ನೂ ಶ್ರೀರಂಗೇಶನನ್ನೂ ಸೇವಿಸಿ, ಧ್ವಜಸ್ತಂಭದ ಸಮೀಪದಲ್ಲಿ ನಿಂತು ತಿರುಪ್ಪಾಣಿಯಾಳ್ವಾರರಂತೆ ಸೇವಿಸಿಕೊಂಡಿರಲು ಸ್ವಾಮಿಯು ತೀರ್ಥ ಮೊದಲಾದವುಗಳನ್ನು ಪ್ರಸಾದಿಸಿ, ಉಭಯ ವಿಭೂತಿ ನಾಯಕತ್ವವನ್ನು ವಹಿಸಿ ತನ್ನ ಸೇವೆಯನ್ನು ಮಾಡಿಕೊಂಡಿರುವಂತೆ ಅರ್ಚಕ ಮುಖದಿಂದ ಆಜ್ಞಾಪಿಸಿದನು. ಒಡೆಯವರು ಸ್ವಾಮಿಯ ಆಜ್ಞೆಯನ್ನು ಶಿರಸಾವಹಿಸಿ, ಪೆರಿಯ ಪಾದಮಹಿಮೆಯಿಂದ ಈ ಉಭಯ ವಿಭೂತಿ-ಐಶ್ವರ್ಯವು ತಮಗುಂಟಾಯಿತೆಂದು ಸಂತುಷ್ಟರಾಗಿ ದೇವಾಲಯದ ಅರ್ಚಕ ಪರಿಚಾರಕರನ್ನು ಆಯಾ ಕೆಲಸಗಳಲ್ಲಿರುವಂತೆ ನಿಯಮಿಸಿ, ಅಕಳಂಕ ನಾಟ್ಟಾಳ್ವಾನೆಂಬ ಶಿಷ್ಯನಿಗೆ ಸರ್ವಾಧಿಕಾರವನ್ನು ವಹಿಸಿ, ಅತನಿಂದ ಸಮಸ್ತೋದ್ಯೋಗವನ್ನೂ ನಡೆಯಿಸುತ್ತಿದ್ದರು.

ಆಗ ಪೆರಿಯ ತಿರುಮಲೆ ನಂಬಿಯಲ್ಲಿಗೆ ಹೋಗಿದ್ದ ಶ್ರೀವೈಷ್ಣ

ವರು ಬಂದು ರಾಮಾನುಜರಿಗೆ ನಮಸ್ಕರಿಸಿ—ಸ್ವಾಮಿನ್! ನಾವು ತಮ್ಮ ಅಪ್ಪಣೆಯನ್ನು ತಿರುಮಲೆನಂಬಿಯವರಿಗೆ ತಿಳುಹಲು, ಅವರು ನಮ್ಮನ್ನು ಒಡಗೊಂಡು ಶಿಷ್ಯಸಮೇತರಾಗಿ ಕಾಳಹಸ್ತಿಗೆ ದಯೆಮಾಡಿ ಮಾಡಿಸಿ, ಅಲ್ಲಿ ಶಿವಪೂಜಾರತರಾಗಿ ಪತ್ರಪುಷ್ಪಗಳನ್ನು ಸಂಗ್ರಹಿಸಿಕೊಂಡಿದ್ದ ಉಳ್ಳಂಕೊಳಂದ ನೈನಾರನ್ನು ಕೆಲವು ಲೌಕಿಕ ವಾರ್ತೆಗಳಿಂದ ಪ್ರಶ್ನೆ ಮಾಡಿದರು. ಅವರು ಅದಕ್ಕೆ ಪ್ರತ್ಯುತ್ತರವಿತ್ತು ಬಿಲ್ವಮರವನ್ನೇರಿ ಪತ್ರವನ್ನು ಕುಯ್ಯುತ್ತಿರಲು, ನಂಬಿಯವರು, ತಮ್ಮ ಶಿಷ್ಯರಿಗೆ—'ತೇವು ಪ್ಪೊರುಳಂಪಡೆಕ್ಕ-' ಎನ್ನುವ ಪಾಶುರದಲ್ಲಿ—'ಪೂವ್ವುಂ ಪೂಶನೈಯುಂ ತಹುಮೇ-' ಎಂಬ ಪದಕ್ಕೆ ಶಾಸ್ತ್ರಾನುಸಾರವಾಗಿ ಅರ್ಥವನ್ನು ಹೇಳುತ್ತಿರುವುದನ್ನು ನೈನಾರು ಕೇಳಿ-ಆಗದು—ಆಗದು-ಎಂದು ರುದ್ರಾಕ್ಷಿ-ಲಿಂಗಗಳನ್ನು ಕಿತ್ತು ಬಿಸುಟು, ವಿಭೂತಿಯನ್ನಳಿಸಿ, ಕಿರೀಟಧಾರಿಯಾದ ವೈಕುಂಠನಾಥನಿರುವಲ್ಲಿ ಜಟಾಮುಕುಟನನ್ನು ಪೂಜಿಸಿದೆನಲ್ಲಾ-ಎಂದು ಪಶ್ಚಾತ್ತಾಪಯುಕ್ತರಾಗಿ ತಮ್ಮನ್ನು ಉಜ್ಜೀವಿಸಬೇಕೆಂದು ನಂಬಿಯವರ ಪಾದಗಳಿಗೆ ನಮಸ್ಕರಿಸಿ, ಮೇಲಕ್ಕೇಳದಿರುವುದನ್ನು ಕಂಡು ಸಾಂತ್ವವಚನಗಳಿಂದ ಸಮಾಧಾನ ಪಡಿಸಿದರು. ಆಗ ನೈನಾರ ಶಿಷ್ಯರು ಅವರನ್ನು ನೋಡಿ,—ನೀವು ಹೀಗೆ ಮಾಡಬಹುದೇ-ಎಂದು ನಿರ್ಬಂಧಿಸಲು ಅವರು, ಮುದ್ರಿಕೆ-ಬೀಗದ ಕಯ್ಗಳನ್ನು ಬಿಸುಟು ಮಂತ್ರವಾದಿಯ ಪಕ್ಕದಲ್ಲಿರುವ ತನಗೆ ಪಿಶಾಚಗಳ ಭಯವಿಲ್ಲವು. ಇನ್ನು ನಿಮಗೂ—ನಮಗೂ ಸಂಬಂಧವಿಲ್ಲವೆಂದು ಹೇಳಿ ಅವರನ್ನು ಕಳುಹಿಸಿ, ತಾವು ನಂಬಿಯವರ ತಿರುವಡಿಗಳನ್ನು ಆಶ್ರಯಿಸಿದರು. (ಸಶೇಷ)

## ವಿಶೇಷವಿನಂತಿ.

ವಿಶ್ವಸನೀಯರಾದ ಸದ್ಧರ್ಮ ಸೋದರೀಸೋದರರಲ್ಲಿ

ನಂದಿನಿಯು ನಾಲ್ಕನೆ ಸಂಚಿಕೆಯು ಹೊರಡುವಾಗಲೇ ಪ್ರಾರಂಭವಾಗಿದ್ದ ವಾತಪಿತ್ತ ವ್ಯಾಧಿಯು ಬಲೀಯವಾಗುತ್ತ ಬಂದು ನಂದಿನಿಯು ಸಕಾಲದಲ್ಲಿ ನಿಮ್ಮ ಕೈಸೇರದೆ ಕಾಲಾತಿಕ್ರಮಣದಿಂದ ನಿಮಗೆ ಬೇಸರವನ್ನುಂಟು ಮಾಡಿದುದಕ್ಕಾಗಿ ಈ ಮೊದಲೇ ನಾಲ್ಕ

ಯುದ್ಧ ಬಾರಿ ಕ್ಷಮಾಪಣವನ್ನು ಕುರಿತು ಬರೆದಿರುವುದು ಸರಿಯಷ್ಟೇ.

ಮೇಲಿನ ಕಾರಣದಿಂದಲೇ ನಂದಿನಿಯನ್ನು ಒಂದು ವರ್ಷಕಾಲವಾದರೂ ನಿಲ್ಲಿಸಬೇಕೆಂದು ಯೋಚಿಸಿದ್ದ ನಮಗೆ ನಿಲ್ಲಿಸುವದು ಸರ್ವಥಾ ಸರಿಯಲ್ಲವೆಂದು ಹಲವು ಕಡೆಗಳಿಂದ ಸನ್ಮಾನ್ಯ ಭ್ರಾತೃ—ಭಗಿನಿಯರ ಪತ್ರಗಳು ಬಂದು ಅಜ್ಞಾತವಾಸದ ಯೋಜನೆಯನ್ನು ತಪ್ಪಿಸಿರುವುದರಿಂದ ಮತ್ತೆ ಪ್ರಾರಂಭಿಸಿರುವೆವು. ಭಗವತ್ಕೃಪೆ ಪೂರ್ಣವಾಗಿರುವುದರಿಂದ ನಂದಿನಿಯ ಪ್ರಯತ್ನವು ಅರ್ಧದಲ್ಲಿ ಭಂಗವಾಗುವುದಿಲ್ಲವೆಂದೂ ಕ್ರಮವಾಗಿ ನಡೆದು ಮೊದಲನ ವರ್ಷದಲ್ಲಿ ಬಿಟ್ಟುಹೋಗಿರುವ ಕರ್ತವ್ಯಾಂಶವನ್ನು ಈ ಬಾರಿ ಸಂಪೂರ್ಣಗೊಳಿಸುವಂತಾದೀತೆಂದೂ ನಂಬುವೆವು. ಆದರೆ-ನಮ್ಮ ಕರ್ಣಾಟ ಸೋದರ ಸೋದರಿಯರಲ್ಲಿ ಅನೇಕರು ಮೇಲೆಮೇಲೆ ಪತ್ರಗಳನ್ನು ಬರೆಯುತ್ತ ಕುಶಲ ಪತ್ರವ್ಯವಹಾರವನ್ನು ಬೆಳೆಯಿಸಬೇಕೆಂದೂ, ಸೋದರ ವಾತ್ಸಲ್ಯದಿಂದ ಕಾಲೋಚಿತ ಸಲಹೆಗಳನ್ನಿತ್ತು ಪ್ರೋತ್ಸಾಹಿಸುತ್ತ ಬರಬೇಕೆಂದೂ ಬರೆಯುತ್ತಿರುವರು. ಸದ್ಯದಲ್ಲಿ ಅವರೆಲ್ಲರಲ್ಲಿಯೂ ನಾವು ಉತ್ತರ ಪ್ರತ್ಯುತ್ತರವನ್ನು ಬೆಳೆಯಿಸುವಷ್ಟು ಅವಕಾಶವುಳ್ಳವರಾಗಿಲ್ಲದುದರಿಂದ, ಆ ನಮ್ಮ ಸೋದರ ಸೋದರಿಯರು ಅಸಮಾಧಾನ ಪಡಬಾರದೆಂದು ಕೋರುವೆವು. ಇಷ್ಟರಿಂದಲೇ ಕರ್ತವ್ಯಕ್ಕೆ ಕೊರತೆಬರುವುದೆಂದೂ ಅವಕಾಶವಿಲ್ಲದ ಈ ಕಾರ್ಯಕ್ಕೆ ಪ್ರಯತ್ನಿಸಲೇಬಾರದಾಗಿತ್ತೆಂದೂ ಆಕ್ಷೇಪಿಸುವ ಕಾರಣವಿಲ್ಲ. ಅವಶ್ಯಕ ವಿಚಾರಗಳಿಗೆ ಸ್ವಲ್ಪ ವಿಳಂಬದಿಂದ ಸಂಗ್ರಹವಾಗಿಯಾದರೂ ಉತ್ತರವನ್ನು ಕೊಡಿಸುವುದರಲ್ಲಿ ಸಂಶಯಪಡಬೇಕಾಗಿಲ್ಲ. ಅಲ್ಲದೆ ನಮ್ಮ ಸೋದರಿಯರು ಸ್ವಹಸ್ತಾಕ್ಷರದಿಂದಲೇ ಬರೆಯುವ ಪತ್ರಗಳಿಗೆ ಸಕಾಲದಲ್ಲಿ ಸದುತ್ತರಗಳನ್ನು ಕೊಡುವುದರಲ್ಲಿ ಕೂಡ ನಮಗೆ ಎಷ್ಟು ಕಾರ್ಯಗೌರವವಿದ್ದರೂ ಉಪೇಕ್ಷಿಸದೆ ಅವರಿಗೆ ಉತ್ಸಾಹದಿಂದಲೇ ಉತ್ತರವನ್ನು ಕೊಡಲುಳ್ಳವರಾಗಿರುವೆವೆಂದೂ, ನಮ್ಮ ಸೋದರಿಯರ ಸೇವೆಗಾಗಿಯೇ ಜನ್ಮವೆತ್ತಿರುವ ನಾವು ಸೋದರಿಯರ ವಿಷಯದಲ್ಲಿ ಉದಾಸೀನರಾಗಿಲ್ಲವೆಂದೂ ನಂಬಿ, ಅವರು ನಿಶ್ಶಂಕೆಯಿಂದ ತಮ್ಮ ಸಂಶಯ-ಸಮಸ್ಯಾ ಪೂರಣಗಳಿಗಾಗಿ ಪತ್ರ

ಮೂಲಕ ಬೆಸಗೊಳ್ಳಬಹುದೆಂದೂ ಈ ಮೂಲಕ ನಿವೇದಿಸುತ್ತಿರುವೆವು. ಈ ಸಂದರ್ಭದಲ್ಲಿಯೇ ನಾವು ಪ್ರಸಿದ್ಧಿಪಡಿಸುವ ವಿಚಾರವೊಂದಿರುವುದು.

ನಮ್ಮ ಧರ್ಮಬಂಧುಗಳಲ್ಲಿ ಕೆಲವರು ಸಂದೇಹಗ್ರಸ್ತರಾಗಿರುವರೆಂದು ಹಿಂದೆಯೇ ಹೇಳಿದ್ದೆವಷ್ಟೆ! ಆ ನಮ್ಮ ಬಂಧುಗಳು ಆವ ಉದ್ದೇಶದಿಂದಲೋ-ತಾವಾಗಿ ವೃಥಾ-ವ್ಯಾಜಾಂತರದಿಂದ ಪತ್ರಗಳನ್ನು ಬರೆಯುತ್ತಿರುವುದೂ-ತಮ್ಮ ಕಡೆಯವರನ್ನು ಹುರುಡಿಸಿ ಅವರಿಂದ ಕುಚೇಷ್ಟೆಗಳನ್ನು ಮಾಡಿಸುತ್ತಿರುವುದೂ-ಅದು ಸಾಲದುದಕ್ಕೆ ತಾವೇ ತಮ್ಮ ಹಸ್ತಾಕ್ಷರದಿಂದಲೇ ಇತರರ ಹೆಸರಿಂದ ಪುಸ್ತಕಗಳಿಗಾಯೋ-ಇತರ ವ್ಯವಹಾರ ವಿಚಾರವಾಗಿಯೋ ಬರೆಯುತ್ತಿರುವುದೂ,-ತಮ್ಮ ಮಿತ್ರರಲ್ಲಿ, ನಾವು ತಮಗೆ ಉತ್ತರವಾಗಲೀ-ಪುಸ್ತಕವಾಗಲೀ ಕಳುಹದಿರುವೆವೆಂದು, ಮತ್ತು ಬರೆದವರಿಗೆ ಉತ್ತರವನ್ನು ಬರೆಯುವರಲ್ಲವೆಂದು ನಮ್ಮ ಮೇಲೆ ಅದೊಂದು ದೊಡ್ಡ ಆರೋಪವನ್ನು ಹೊರೆಯಿಸುತ್ತಿರುವುದೂ ತಿಳಿದು ಬಂದಿದೆ. ಅಂತಹ ನಮ್ಮ ಬಾಂಧವರ್ಗೀಯರಲ್ಲಿ ಪತ್ರಕರ್ತರು ಕೂಡ ಒಬ್ಬಿಬ್ಬರು ಸೇರಿರುವುದಾಗಿ ತಿಳಿಯುತ್ತೇವೆ. ಅಂತಹ ಘನಬಂಧುಗಳಿಗೆ ನಾವು ನಿವೇದಿಸುವುದೆಂದರೆ ಇಷ್ಟೇ:— ನಮ್ಮ ಮಾತೃಮಂದಿರಕ್ಕೆ ಬರುವ ಆವುದೇ ಒಂದು ಪತ್ರವಾಗಲಿ— ನಮ್ಮ ಅವಗಾಹನೆಗೇ ಬರಬೇಕಾಗಿರುವುದು. ಹಾಗೆ ಬಂದ ಪತ್ರಗಳಲ್ಲಿ ಆವದೇ ಒಂದು ವಾಕ್ಯವೋ-ಕಡೆಗೆ ಒಂದು ಶಬ್ದವು, ಅಪಾರ್ಥವನ್ನು ಹೇಳುವಂತಿಹುದೊ ಆವ ಪತ್ರದಿಂದ ಪತ್ರಕಾರರು ಸಂಶಯಗ್ರಸ್ತರಾಗಿ ಪರೀಕ್ಷೆಗಾಗಿ-ಇಲ್ಲವೇ-ಕುಚೇಷ್ಟೆಗಾಗಿ-ಅಥವಾ-ದುರಾಶಾಪ್ರೇರಿತರಾಗಿ ಬರೆದಿರುವವರೆಂದು ತಿಳಿದು ಬರುವುದೊ,-ಅಂತಹರಿಗೆ,—ಅವರು ಕೇವಲ ಸಮೀಪ ಬಂಧುಗಳಾಗಿದ್ದರೂ, ಅವರಿಗೆ ಕೂಡ ನಮ್ಮಿಂದ ಆವದೇ ಬಗೆಯ ಉತ್ತರವು ದೊರೆಯಲಾರದೆಂದೂ—ಅಂತಹರ ವಿಚಾರದಲ್ಲಿ ಮೌನಧಾರಣೆಯೇ ನಮ್ಮ ಕರ್ತವ್ಯಕರ್ಮವೆಂದೂ ಆ ನಮ್ಮ ಬಂಧುವರ್ಗೀಯರು ತಿಳಿದಿರಬೇಕಾಗಿದೆ. ಅಲ್ಲದೆ,-ಮುಂದೆ ಪತ್ರವನ್ನು ಬರೆಯುವ ನಮ್ಮ ಧರ್ಮಭ್ರಾತೃಗಳು ಕೂಡ ಲೇಖನಿಯನ್ನು ಮನಬಂ

ದಂತೆ ಓದಿಸುವುದನ್ನು ಬಿಟ್ಟು, ತಮ್ಮ ಮರ್ಯಾದೆಯನ್ನು ಮೀರದೆ, ಪ್ರಕೃತಕ್ಕೆ ಬೇಕಾದ ವಿಚಾರಗಳನ್ನು ಮಾತ್ರ-ನಿರ್ಮಲಮನಸ್ಸಿನಿಂದ-ಉಚಿತರೀತಿಯಲ್ಲಿ ಬರೆಯಬೇಕೆಂಬುದನ್ನು ಅವರು ತಮ್ಮ ಘನಚಿತ್ತಕ್ಕೆ ತೆಗೆದುಕೊಳ್ಳಬೇಕೆಂದು ಕೂಡ ನಾವು ನಮ್ಮ ಕರ್ತವ್ಯ—ಧರ್ಮಕ್ಕಾಗಿ ಈ ಮೂಲಕ ವಿಜ್ಞಾಪಿಸಬೇಕಾಗಿದೆ.

ಇಂತು ನಿವೇದಿಸುವ ನಿರಂತರ ಶ್ರೇಯಃಕಾಂಕ್ಷಿಣಿ

ಧರ್ಮಭಗಿನಿ—ಸಂ. "ನಂದಿನಿ"

# ಮಹತ್ವವಾದ ಪ್ರಕಟನೆಯು



ನಂದಿನಿಯ ಆಕಾರವನ್ನು ಬೆಳೆಸಬೇಕೆಂದೂ, ಅದರಲ್ಲಿಯ ಪುಟ ಸಂಖ್ಯೆಗಳನ್ನು ಹೆಚ್ಚಿಸಬೇಕೆಂದೂ, ನಂದನಿಯ ವಿಷಯಕವಾಗಿ ಅಭಿಮಾನವುಳ್ಳವರಾದ ನಮ್ಮ ಬಂಧು ಭಗಿನಿಯರು ಆಗ್ರಹಪೂರ್ವಕವಾಗಿ ಸೂಚಿಸುತ್ತಿರುವದರಿಂದ, ಹಾಗೂ ಅವರ ಸೂಚನೆಯು ನಮಗೆ ಆಜ್ಞಾರೂಪವಾಗಿರುವದರಿಂದ, ಬರುವ ಸಂಚಿಕೆಯಿಂದ ನಂದಿನಿಯು ಆಕಾರವನ್ನು ಬೆಳೆಸುವದು ನಿಶ್ಚಯವಾಗಿದೆ. ನಂದಿನಿಯು ಈಗಿನ ಆಕಾರವು ಡಬಲ್‌ಕ್ರೌನ್ ೧೬ ಪುಟಗಳುಳ್ಳದ್ದಾಗಿದ್ದು, ಇನ್ನು ಮುಂದೆ ಅದು ಡಬಲ್‌ಕ್ರೌನ್ ೮ ಪುಟಗಳುಳ್ಳದ್ದಾಗುವದಲ್ಲದೆ, ಅದರಲ್ಲಿ ಒಂದು ಫಾರ್ಮ ಹೆಚ್ಚಿಗೆ ಸೇರಿಸಲ್ಪಡುವದು. ಮುದ್ರಣ ಸಾಹಿತ್ಯಗಳ ದುರ್ಭಿಕ್ಷೆಯ ಕಾಲದಲ್ಲಿ ಇದು ಸಾಹಸದ ಕಾರ್ಯವಾಗಿದ್ದರೂ, ವಾಚಕರ ಸಹಾನುಭೂತಿಯು ನಮಗೆ ಸಂಪೂರ್ಣವಾಗಿ ಬೆಂಬಲವಾಗುವದೆಂದು ನಾವು ನಂಬಿದ್ದೇವೆ. ಹೊಸ ಸಂಚಿಕೆಗೆ ವಾರ್ಷಿಕ ಚಂದಾಹಣ ಅಂ. ವೆ. ಸೇರಿ ೨ ರೂ. ೮ ಆಣೆಗಳು.

| | |
|---|---|
| ಮಾತೃಮಂದಿರ<br>ನಂಜನಗೂಡು | —ವ್ಯವಸ್ಥಾಪಿಕೆ—<br>“ನಂನಿದಿ” |

Printed at the Shri Krishna Press, Hubli,
by B. N. Mutalik Desai & published by
Shrimati Tirumalamba at Matrumandirum Nanjangud.

